# ವಸಾಹತುಶಾಹಿ ಕಾಲಘಟ್ಟದ ಕನ್ನಡ ಸಾಹಿತ್ಯ ಚರಿತ್ರೆ

## ಒಂದು ತಾತ್ವಿಕ ಜಿಜ್ಞಾಸೆ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ
ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕ
ರೋಹಿಣಾಕ್ಷ

ಮಾರ್ಗದರ್ಶಕರು
ಡಾ. ಜೆ. ಎಸ್. ಸದಾನಂದ

೨೦೦೮

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು.

# ವಸಾಹತುಶಾಹಿ ಕಾಲಘಟ್ಟದ ಕನ್ನಡ ಸಾಹಿತ್ಯ ಚರಿತ್ರೆ: ಒಂದು ತಾತ್ವಿಕ ಜಿಜ್ಞಾಸೆ



ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ

ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕ

ರೋಹಿಣಾಕ್ಷ



ಮಾರ್ಗದರ್ಶಕರು

ಡಾ. ಜೆ. ಎಸ್. ಸದಾನಂದ

೨೦೦೮



ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು.

# ಯೋಗ್ಯತಾ ಪತ್ರ

ರೋಹಿಣಾಕ್ಷ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **'ವಸಾಹತುಶಾಹಿ ಕಾಲಘಟ್ಟದ ಕನ್ನಡ ಸಾಹಿತ್ಯಚರಿತ್ರೆ : ಒಂದು ತಾತ್ವಿಕ ಜಿಜ್ಞಾಸೆ'** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ಅಭಿಪ್ರಾಯ ಸಂಗ್ರಹ, ಭೋಧನೆ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು.

**ಡಾ. ಜೆ.ಎಸ್. ಸದಾನಂದ**
ಸಂಶೋಧನಾ ಮಾರ್ಗದರ್ಶಕರು

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ **'ವಸಾಹತುಶಾಹಿ ಕಾಲಘಟ್ಟದ ಕನ್ನಡ ಸಾಹಿತ್ಯ ಚರಿತ್ರೆ: ಒಂದು ತಾತ್ವಿಕ ಜಿಜ್ಞಾಸೆ'** ಶೀರ್ಷಿಕೆಯ ಈ ಸಂಪ್ರಬಂಧವು ಈ ಸಂಶೋಧಕನ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ.ಜೆ.ಎಸ್. ಸದಾನಂದ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

Rohinaksha

**ರೋಹಿಣಾಕ್ಷ**

ಕರ್ನಾಟಕ ಥಿಯೋಲಾಜಿಕಲ್ ಕೇಂದ್ರ

ಮಂಗಳೂರು,

# ವಸಾಹತುಶಾಹೀ ಕಾಲಘಟ್ಟದ ಕನ್ನಡ ಸಾಹಿತ್ಯ ಚರಿತ್ರೆ:

# ಒಂದು ತಾತ್ವಿಕ ಜಿಜ್ಞಾಸೆ

## ಅಧ್ಯಾಯಗಳ ವಿವರ

# ಅಧ್ಯಾಯ ಒಂದು

## ೧.೦ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ.

೧.೧ ಅಧ್ಯಯನದ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ, ಸ್ವರೂಪ

೧.೩ ಅಧ್ಯಯನದ ವ್ಯಾಪ್ತಿ

೧.೪ ಹಿಂದಣ ಅಧ್ಯಯನದ ಹೆಜ್ಜೆಗಳು

# ೧ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ

## ೧.೧ ಪ್ರಸ್ತಾವನೆ:

ಕನ್ನಡ ಸಾಹಿತ್ಯಕ್ಕೆ ಸಾವಿರ ವರ್ಷಗಳಿಗೂ ಮಿಕ್ಕ ಒಂದು ಪರಂಪರೆ ಇದೆ. ಈ ಪರಂಪರೆಯಲ್ಲಿ ಸಾಹಿತ್ಯದ ರೂಪ, ಭಾಷೆ, ವಸ್ತು ವಿನ್ಯಾಸದಲ್ಲಿ ಹಲವು ನೆಲೆಯ ಪಲ್ಲಟಗಳನ್ನು ಕಂಡಿದ್ದೇವೆ. ಸಾಹಿತ್ಯ ಕೃತಿಗಳು ತನ್ನ ಕಾಲದ ಹಲವು ಬಗೆಯ ಒತ್ತಡಗಳಿಂದ ರೂಪ ಪಡೆದಿದ್ದು, ಸಮಗ್ರವಾಗಿ ವಿವೇಚಿಸಿದಾಗ ಅದೊಂದು ಮಾನವ ಸಮಾಜದ ಸಂಸ್ಕೃತಿಯ ಕಥನವೇ ಆಗಿದೆ. ಸಮಾಜದಲ್ಲಿರುವ ಚೈತನ್ಯ ಈ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಬಹು ದೊಡ್ಡ ಪಾಲನ್ನು ನೀಡಿರುತ್ತದೆ.

ಕನ್ನಡದಲ್ಲಿ ಈ ಸಾಹಿತ್ಯ ಪರಂಪರೆ ಇಷ್ಟು ದೀರ್ಘವಾಗಿದ್ದಾಗಲೂ ಸಾಹಿತ್ಯಕ್ಕೆ ಅಕ್ಷರಿಕ ರೂಪದ ಕವಿ–ಕಾಲದ ನಿಖರತೆಯುಳ್ಳ ಒಂದು ಚರಿತ್ರೆಯನ್ನು ಕಟ್ಟುವ ಪ್ರಯತ್ನ ಬಹು ಕಾಲದ ನಂತರ ನಡೆದಿರುವುದು ಗಮನಕ್ಕೆ ಬರುತ್ತದೆ. ಈ ಪ್ರಯತ್ನದ ಹಿಂದೆಯೂ ಅನ್ಯದೇಶದಿಂದ ಬಂದಂತಹ ವಿದ್ವಾಂಸರ ಪ್ರಯತ್ನವೇ ಪ್ರಾರಂಭದಲ್ಲಿ ಕಂಡು ಬರುವುದು. ಈ ಪ್ರಯತ್ನದಿಂದ ಮತ್ತು ಜ್ಞಾನ ಮಾದರಿಯನ್ನು ಕಟ್ಟುವ ವ್ಯವಸ್ಥೆಯಿಂದ ಪ್ರೇರಿತರಾಗಿ ನಮ್ಮ ನಾಡಿನ ವಿದ್ವಾಂಸರು ಮುಂದೆ ಕಾರ್ಯವನ್ನು ಕೈಗೊಂಡದ್ದನ್ನು ನೋಡಬಹುದು. ಸಾಹಿತ್ಯ ಎಂಬ ಭಾವ ನಿರ್ಮಿತಿಯನ್ನು ಸಾಹಿತ್ಯ ಚರಿತ್ರೆ ಎಂಬ ವೈಚಾರಿಕ ಆಕೃತಿಯ ನಿರ್ಮಾಣಕ್ಕಾಗಿ ಇಲ್ಲಿ ಬಳಸಿಕೊಳ್ಳಲಾಗಿದೆ. ಈ ಪ್ರಕ್ರಿಯೆಯನ್ನು ಮತ್ತು ಅದರ ಹಿಂದಿನ ಧೋರಣೆಗಳನ್ನು ಗುರುತಿಸುವ ಕೆಲಸ ಈ ಅಧ್ಯಯನದ ಉದ್ದೇಶಗಳಲ್ಲಿ ಬಹುಮುಖ್ಯವಾದ ಸಂಗತಿ.

ಒಂದು ದೇಶೀಯ ಭಾಷೆ ತನ್ನ ವಿಕಾಸದ ಗತಿಯಲ್ಲಿ ನಿರ್ಮಿಸಿಕೊಂಡಿರುವ ಸಾಹಿತ್ಯ ರೂಪಗಳು ಮತ್ತು ಈ ಸಾಹಿತ್ಯ ರೂಪವೇ ತನ್ನ ಆಂತರಿಕ ತಿಳುವಳಿಕೆಯಿಂದ ಕಟ್ಟಿದ ಒಂದು 'ಪರಂಪರೆ' ಇರುತ್ತದೆ. ಆದರೆ ವಸಾಹತಿನ ಕಾಲಘಟ್ಟದಲ್ಲಿ ಪಶ್ಚಿಮ ಈ 'ಪರಂಪರೆ'ಯನ್ನು ತನ್ನ ಭಾಷಿಕ ಮತ್ತು ವಿಚಾರದ ಮೊನಚಿನಿಂದ ಅದೊಂದು ವೈಚಾರಿಕ ಆಕೃತಿ ಅಲ್ಲ ಎಂದು ನಿರಾಕರಿಸಿ, ತನ್ನ ನೆಲೆಯಿಂದ ವೈಚಾರಿಕವಾದ ಒಂದು ಆಕೃತಿಯನ್ನು ನಿರ್ಮಿಸುವ ಕೆಲಸವನ್ನು ಮಾಡುತ್ತದೆ. ಈ ಹಿನ್ನೆಲೆಯಿಂದ ಕನ್ನಡ ಸಾಹಿತ್ಯ ಚರಿತ್ರೆಯ ಉಗಮ ಮತ್ತು ಅದರ ಬೆಳವಣಿಗೆಯನ್ನು ನೋಡಬೇಕು.

## ೧.೨ ಅಧ್ಯಯನದ ಉದ್ದೇಶ ಮತ್ತು ಸ್ವರೂಪ:

ವಸಾಹತುಶಾಹಿ ಕಾಲಘಟ್ಟದಲ್ಲಿ ನಡೆದ ಒಂದು ಜ್ಞಾನ ಶಾಖೆಯ ಜೊತೆಗಿನ ಮುಖಾಮುಖಿಯೇ ಸಾಹಿತ್ಯ ಚರಿತ್ರೆಯ ಉಗಮಕ್ಕೆ ಕಾರಣವಾಯಿತು. ಈ ಮುಖಾಮುಖಿ ಕನ್ನಡದಂತಹ ಒಂದು ದೇಶೀಯ ಭಾಷೆಗೆ ಒಂದು ಮಾದರಿಯನ್ನು ರೂಪಿಸಿಕೊಟ್ಟಿತು. ಹೀಗೆ

ರೂಪುಗೊಂಡ ಆಕೃತಿಯನ್ನೇ ಆಕರವಾಗಿ ಇಟ್ಟುಕೊಂಡು ಶೋಧಕ್ಕೆ ಒಳಪಡಿಸುವುದು ಈ ಅಧ್ಯಯನದ ಉದ್ದೇಶ.

ಕನ್ನಡದಲ್ಲಿ ಸಾಹಿತ್ಯವನ್ನು ಬೇರೆ ಬೇರೆ ಕಾಲಘಟ್ಟದ ಹೊಸ ಹೊಸ ತಿಳುವಳಿಕೆಯಿಂದ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆದರೆ ಸಾಹಿತ್ಯ ಚರಿತ್ರೆಯನ್ನು ಈ ನಿಟ್ಟಿನಲ್ಲಿ ಇಷ್ಟು ಗಂಭೀರವಾದ ಅಧ್ಯಯನಕ್ಕೆ ಒಳಪಡಿಸಿಲ್ಲ. ಕನ್ನಡದ ಒಂದು ಸಾಹಿತ್ಯ ಪರಂಪರೆ, ವಸಾಹತಿನ ಜೊತೆ ಎದುರಾದಾಗ ಅವುಗಳು ಪರಸ್ಪರ ಸ್ಪಂದಿಸಿದ ಬಗೆಯನ್ನು ಅರಿಯಬೇಕು. ಧರ್ಮಪ್ರಚಾರ ಮತ್ತು ಆಡಳಿತದ ಉದ್ದೇಶದಿಂದ ಬಂದವರು ಇಲ್ಲಿನ ಸಾಹಿತ್ಯ ಪರಂಪರೆಯ ಜೊತೆ ಮುಖಾಮುಖಿಯಾದ ಬಗೆಯನ್ನು ತಿಳಿಯಬೇಕಾದರೆ ವಸಾಹತುವೇ ಕಟ್ಟಿದ ಜ್ಞಾನ ಮಾದರಿಗಳನ್ನು ವಿಶ್ಲೇಷಣೆಗೆ ಒಳಪಡಿಸಬೇಕು. ಈ ಸಾಹಿತ್ಯ ಚರಿತ್ರೆ ಅಂತಹ ಒಂದು ಜ್ಞಾನ ಮಾದರಿ.

ನಿರ್ವಸಾಹತೀಕರಣದ ಕಾಲಘಟ್ಟದಲ್ಲಿ ಇಂದು ವಸಾಹತಿನಿಂದ ದತ್ತವಾದ ಜ್ಞಾನರಾಶಿ ಮತ್ತು ಚಿಂತನಾ ವಿನ್ಯಾಸದಿಂದ ಬಿಡುಗಡೆಯಾಗುವ ಬಗೆಗಳನ್ನು ಚಿಂತಿಸುತ್ತಿರುವಾಗ, ಈ ಜ್ಞಾನರೂಪದ ಮಾದರಿಗಳಾಗಿ ನಮಗೆ ಸಾಹಿತ್ಯ ಚರಿತ್ರೆ ಕಾಣುತ್ತದೆ. ಮತ್ತು ಅದೇ ಕಾಲಘಟ್ಟದಲ್ಲಿ ಇಲ್ಲಿನ ದೇಶೀಯ ವಿದ್ವಾಂಸರಿಂದ ರಚನೆಯಾದ ಸಾಹಿತ್ಯ ಚರಿತ್ರೆಯ ಕೆಲಸಗಳು ಒಂದು ಕಡೆ ಅದೇ ಚಿಂತನಾ ವಿನ್ಯಾಸವನ್ನು ಒಳಗೊಂಡಂತೆ ಕಂಡರೆ, ಮತ್ತೆ ಕೆಲವು ಕಡೆ ಆ ಚಿಂತನಾ ವಿನ್ಯಾಸದಿಂದ ಒಂದು ಬಗೆಯ ಬಿಡುಗಡೆಯನ್ನು ಪಡೆಯುವ ಮಾದರಿಯಲ್ಲಿ ಕಾಣುತ್ತದೆ. ಈ ಅಧ್ಯಯನ ಅಂತಹ ಸ್ವರೂಪವನ್ನು ತಿಳಿಯುವ ಉದ್ದೇಶದ್ದು.

ಹೀಗಾಗಿ ಈ ಅಧ್ಯಯನವು ವಸಾಹತಿನ ಕಾಲಘಟ್ಟದಲ್ಲಿ ಕಟ್ಟಲ್ಪಟ್ಟ ಚರಿತ್ರೆಯ ಪಠ್ಯಗಳನ್ನು ಆಕರಗಳಾಗಿ ಇಟ್ಟುಕೊಂಡು ವಿಶ್ಲೇಷಣೆಯನ್ನು ಮಾಡುವ ಸ್ವರೂಪದಲ್ಲಿದೆ. ಎಫ್. ಕಿಟ್ಟೆಲ್, ಇ.ಪಿ. ರೈಸ್, ಆರ್. ನರಸಿಂಹಾಚಾರ್ಯ ಮತ್ತು ಎ. ವೆಂಕಟಸುಬ್ಬಯ್ಯನವರ ಸಾಹಿತ್ಯ ಚರಿತ್ರೆಯ ಪಠ್ಯಗಳಲ್ಲಿ ಮುಖ್ಯ ಆಕರಗಳಾಗಿ ಇಟ್ಟುಕೊಂಡು ಈ ಅಧ್ಯಯನ ತನ್ನ ವಿಶ್ಲೇಷಣೆಯನ್ನು ನೀಡುತ್ತದೆ.

ಈ ಅಧ್ಯಯನವು ಸ್ವಲ್ಪ ಮಟ್ಟಿಗೆ ಪ್ರಾಯೋಗಿಕ ವಿಮರ್ಶೆಯ ಮಾದರಿಯದ್ದು. ಇರುವ ಆಕರವನ್ನೇ ಬಳಸಿಕೊಂಡು ಆ ಆಕರದಿಂದ ದತ್ತವಾಗುವ ಜ್ಞಾನವನ್ನು ಇನ್ನೊಂದು ಸಂದರ್ಭದಲ್ಲಿ ಊಹನಾತ್ಮಕವಾಗಿ ಬಳಸಿಕೊಂಡು ಅದನ್ನು ಸಮಗ್ರವಾಗಿ ಗ್ರಹಿಸುವ ನೆಲೆಯದ್ದು. ಇಲ್ಲಿ ಆಕರವಾಗಿ ಬಳಸಲಾಗುವ ಸಾಹಿತ್ಯ ಚರಿತ್ರೆಯ ಪಠ್ಯಗಳನ್ನು ಬಿಡಿ ಬಿಡಿಯಾಗಿ ನೋಡಿದರೂ ಪ್ರತಿಯೊಬ್ಬರ ಪಠ್ಯಗಳನ್ನು ಅದರ ಒಳಗಿನ ಸಮಗ್ರ ಸಂಗತಿಗಳನ್ನು ವಿಶ್ಲೇಷಣೆಗೆ ಒಳಪಡಿಸುವ ಮಾದರಿಯದ್ದಲ್ಲ. ಇಡೀ ಪಠ್ಯವನ್ನೇ ಒಂದು ಆಕೃತಿಯಾಗಿ ಪರಿಗ್ರಹಿಸಿ ಅದರ ಮೂಲಕ ನಡೆಸುವ ವಿಶ್ಲೇಷಣಾ ಸ್ವರೂಪದ್ದು. ಬಿಡಿಬಿಡಿಯಾದ ವಿವರಗಳಿಗೆ ಹೋದರೆ ಅದು ಸಾಹಿತ್ಯ ಚರಿತ್ರೆಯ ಒಂದು

ಮಾದರಿಯಾದೀತೆ ಹೊರತು ಈಗಾಗಲೇ ಕಟ್ಟಿದ ಪಠ್ಯದ ವಿಶ್ಲೇಷಣೆ ಆಗಲಾರದು. ಈ ನೆಲೆಯಿಂದ ಇಂತಹ ಎಚ್ಚರವನ್ನು ಅಧ್ಯಯನದ ಉದ್ದಕ್ಕೂ ಇಟ್ಟುಕೊಳ್ಳಲಾಗಿದೆ.

ಈಗಾಗಲೇ ಸಾಹಿತ್ಯ ಚರಿತ್ರೆಯನ್ನು ಅನೇಕ ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮ ತಮ್ಮದೇ ಆದ ಮಾದರಿಯಲ್ಲಿ ಕಟ್ಟಿದ್ದಾರೆ. ಈ ಎಲ್ಲಾ ಮಾದರಿಗಳೂ ಹಿಂದಿನ ಸಾಹಿತ್ಯ ಚರಿತ್ರೆಯ ಕೆಲವು ಮಿತಿಗಳನ್ನು ಹೇಳಿಕೊಂಡು ಅದನ್ನು ದಾಟುವ ನೆಲೆಯಲ್ಲಿ ತಾವು ಪ್ರಯತ್ನವನ್ನು ಮಾಡಿದ್ದೇವೆ ಎನ್ನುತ್ತಾರೆ. ಈ ಅಧ್ಯಯನಕ್ಕೆ ಅಂತಹ ಮಿತಿಗಳನ್ನು ಗುರುತಿಸುವ ಉದ್ದೇಶವಿದ್ದರೂ ಆ ಮಿತಿಗಳನ್ನು ದಾಟಿ ತಾನೇ ಒಂದು ಸಾಹಿತ್ಯ ಚರಿತ್ರೆಯಾಗುವ ಉದ್ದೇಶ ಇಲ್ಲ. ಇದನ್ನು ವಿಶ್ಲೇಷಣೆಯ ಸಂದರ್ಭದಲ್ಲಿ ಗುರುತಿಸಲಾಗಿದೆ.

**೧.೩ ಅಧ್ಯಯನದ ವ್ಯಾಪ್ತಿ:**

ಸಾಹಿತ್ಯ ರಚನೆ ಎಂಬ ಕ್ರಿಯೆ ವಸಾಹತಿನ ಕಾಲಘಟ್ಟದಲ್ಲಿ ಆರಂಭವಾಯಿತಷ್ಟೆ. ಅದು ಅಲ್ಲಿಗೆ ನಿಂತಿಲ್ಲ. ಆಧುನಿಕ ಸಂದರ್ಭದಲ್ಲಿ ಬೇರೆ ಬೇರೆ ಅಗತ್ಯಗಳಿಗೆ ಅನುಗುಣವಾಗಿ ಸಾಹಿತ್ಯ ಚರಿತ್ರೆಯನ್ನು ಮತ್ತೆ ಮತ್ತೆ ಪುನರ್ ರಚಿಸುವ ಪ್ರಯತ್ನಗಳು ನಡೆದಿವೆ. ಶೋಧನೆಯ ಹೊಸ ಹೊಸ ಸಾಧ್ಯತೆಗಳು ಎಲ್ಲಾ ಜ್ಞಾನಶಾಸ್ತ್ರಗಳಿಗೆ ಇರುವಂತೆ ಸಾಹಿತ್ಯ ಚರಿತ್ರೆಗೂ ಇರುವುದರಿಂದ ಬೇರೆ ಬೇರೆ ಕಾಲಘಟ್ಟದಲ್ಲಿ ನಡೆದ ಹೊಸ ಹೊಸ ಶೋಧಗಳಿಂದ ನಮ್ಮ ಹಳೆಯ ತಿಳುವಳಿಕೆಗಳು ಬಿದ್ದುಹೋಗಿವೆ. ಹೊಸ ಮಾಹಿತಿಯ ಆಧಾರದಲ್ಲಿ ಮತ್ತೆ ನಮ್ಮ ಜ್ಞಾನವನ್ನು ಪುನರ್ ರಚಿಸಿಕೊಂಡಿದ್ದೇವೆ. ಈ ಹಿನ್ನೆಲೆಯಿಂದ ನೋಡಿದಾಗ ಕನ್ನಡದಲ್ಲಿ ಅನೇಕ ಶೈಕ್ಷಣಿಕ ಅವಶ್ಯಕತೆಗಳಿಗೂ ಸೇರಿದಂತೆ ಸಾಹಿತ್ಯ ಚರಿತ್ರೆಯನ್ನು ಮತ್ತೆ ಮತ್ತೆ ಸಣ್ಣ ಮತ್ತು ಬೃಹತ್ ಪ್ರಮಾಣದಲ್ಲಿ ಕಟ್ಟಲಾಗಿದೆ. ಈ ಎಲ್ಲ ಸಾಹಿತ್ಯ ಚರಿತ್ರೆಗಳಿಗೂ ಭಿನ್ನ ಭಿನ್ನವಾದ ಉದ್ದೇಶಗಳು ಇದ್ದೇ ಇದೆ.

ಈ ಅಧ್ಯಯನವು ವಸಾಹತುಶಾಹಿ ಕಾಲಘಟ್ಟದಲ್ಲಿ ಬಂದ ಸಾಹಿತ್ಯ ಚರಿತ್ರೆಯಲ್ಲಿ ಪ್ರಾತಿನಿಧಿಕವಾಗಿ 4 ಜನ ವಿದ್ವಾಂಸರನ್ನು ಆಯ್ಕೆ ಮಾಡಿಕೊಂಡು ಆ ಮೂಲಕ ಇಡೀ ವಸಾಹತುಶಾಹಿ ಕಾಲಘಟ್ಟದಲ್ಲಿ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಹಿಂದೆ ಇದ್ದ ಧೋರಣೆಗಳಲ್ಲಿ, ಅದರ ಸ್ವರೂಪವನ್ನು ಕಟ್ಟಿದ ಕ್ರಮವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿ 'ವಸಾಹತುಶಾಹಿ ಕಾಲಘಟ್ಟ' ಎನ್ನುವುದು ಒಂದು ನಿರ್ದಿಷ್ಟ ಕಾಲಸೂಚಕ. ಆ ಕಾಲಾವಧಿಯಲ್ಲಿ ಸಾಹಿತ್ಯ ಚರಿತ್ರೆ ರಚನೆಯ ಕೆಲಸಗಳನ್ನು ಗಮನಿಸಲಾಗುವುದು. ಈ ನೆಲೆಯಿಂದ, ಎಫ್. ಕಿಟ್ಟೆಲ್‌ರವರ 'Old Canarese Literature' ಮತ್ತು 'An Essay on Canarese Literature' ಎಂಬ ಎರಡು ಪ್ರಬಂಧಗಳನ್ನು, ಇ.ಪಿ. ರೈಸ್‌ರವರ 'A History of Kanarese

Literature' ಎಂಬ ಕೃತಿಯನ್ನೂ, ಆರ್. ನರಸಿಂಹಾಚಾರ್ಯರ 'ಕರ್ನಾಟಕ ಕವಿಚರಿತೆ'ಯ

Literature' ಎಂಬ ಕೃತಿಯನ್ನೂ, ಆರ್. ನರಸಿಂಹಾಚಾರ್ಯರ 'ಕರ್ನಾಟಕ ಕವಿಚರಿತೆ'ಯ

ಮೂರು ಸಂಪುಟಗಳನ್ನೂ, ಡಾ। ಎ. ವೆಂಕಟಸುಬ್ಬಯ್ಯನವರ 'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ' ಎಂಬ ಕೃತಿಗಳನ್ನಷ್ಟೇ ಈ ಅಧ್ಯಯನಕ್ಕೆ ಸೀಮಿತಗೊಳಿಸಲಾಗಿದೆ. ಹಾಗಾಗಿ ಈ ಅಧ್ಯಯನ ಈ ಸಾಹಿತ್ಯ ಚರಿತ್ರೆಯ ಪಠ್ಯಗಳ ಆಧಾರಗಳ ಹಿನ್ನೆಲೆಯಿಂದ ಆ ಕಾಲದ ಜ್ಞಾನ ರೂಪಗಳನ್ನು ಕಟ್ಟಿದ ಕ್ರಮವನ್ನು ಜಿಜ್ಞಾಸೆಗೆ ಒಳಪಡಿಸಲಾಗಿದೆ.

**೧.೪ ಹಿಂದಣ ಅಧ್ಯಯನದ ಹೆಜ್ಜೆಗಳು:**

ಕನ್ನಡದಲ್ಲಿ ಮಿಷನರಿಗಳಿಂದ ನಡೆದಿರುವ ಜ್ಞಾನ ಕಾರ್ಯದ ಕುರಿತು ಬೇರೆ ಬೇರೆ ಮುಖದ ಅಧ್ಯಯನಗಳು ಈಗಾಗಲೇ ನಡೆದಿವೆ. ಈ ಅಧ್ಯಯನಗಳು ಬಹು ಸಮಗ್ರ ಮಾದರಿಯದು. ಇಲ್ಲಿ ಒಟ್ಟು ಮಿಷನರಿಗಳ ಕೆಲಸದ ವಿಶ್ಲೇಷಣೆ ನಡೆದಿದೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸುವುದಾದರೆ, ಡಾ। ಶ್ರೀನಿವಾಸ ಹಾವನೂರರ 'ಹೊಸಗನ್ನಡದ ಅರುಣೋದಯ' ಎಂಬ ಮಹಾಪ್ರಬಂಧದಲ್ಲಿ ಮಿಷನರಿಗಳ ವಿವಿಧ ಕ್ಷೇತ್ರಗಳ ಕೊಡುಗೆಯನ್ನು ವಿವರವಾಗಿ ನೀಡಿದ್ದಾರೆ. ಡಾ। ರಾ.ಯ. ಧಾರವಾಡಕರ ಅವರು 'ಹೊಸಗನ್ನಡ ಸಾಹಿತ್ಯದ ಉದಯಕಾಲ' ಎಂಬ ಮಹಾ ಪ್ರಬಂಧದಲ್ಲಿ ಮಿಷನರಿಗಳ ಸಾಹಿತ್ಯ ಕಾರ್ಯದ ಕುರಿತು ವಿವರಿಸಿದ್ದಾರೆ. ಡಾ। ಪೀಟರ್ ವಿಲ್ಸನ್ ಪ್ರಭಾಕರ್ ಕರ್ನಾಟಕದಲ್ಲಿ ಬಾಸೆಲ್ ಮಿಷನರಿಗಳ ಕಾರ್ಯದ ಕುರಿತು ಅಧ್ಯಯನ ನಡೆಸಿದ್ದಾರೆ. ಡಾ। ಕೆ.ಎಂ. ಮ್ಯಾಥ್ಯೂ ಅವರು 'ಎಫ್. ಕಿಟ್ಟೆಲ್ ಒಂದು ಸಮಗ್ರ ಅಧ್ಯಯನ' ಎಂಬ ಮಹಾಪ್ರಬಂಧದಲ್ಲಿ ಕಿಟ್ಟೆಲ್‌ರ ಬಗೆಗೆ ಸಮಗ್ರವಾಗಿ ಅಧ್ಯಯನವನ್ನು ಮಾಡಿದ್ದಾರೆ. ಡಾ। ಗೀತಾ ಎಸ್. ನಂದಿಹಾಳ ಅವರು 'ಕನ್ನಡಕ್ಕೆ ಬಾಸೆಲ್ ಮಿಷನರಿಗಳ ಕೊಡುಗೆ' ಎಂಬ ಅಧ್ಯಯನವನ್ನು ಮಾಡಿದ್ದಾರೆ. ಡಾ। ಎಂ.ಎಂ. ಕಲಬುರ್ಗಿಯವರು 'ಕನ್ನಡ ಸಾಹಿತ್ಯ ಚರಿತ್ರೆಗೆ ಕಿಟ್ಟೆಲ್ಲರ ಕೊಡುಗೆ' ಎಂಬ ಲೇಖನವನ್ನು ಬರೆದಿದ್ದಾರೆ. ಹಾಗೆಯೇ ಬೆಂಗಳೂರು ವಿ.ವಿ.ಯ 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' ಹಾಗೂ ಮೈಸೂರು ವಿ.ವಿ.ಯ 'ಕನ್ನಡ ಸಾಹಿತ್ಯ ಚರಿತ್ರೆಯ ಮುನ್ನುಡಿ', ಪ್ರಸ್ತಾವನೆಗಳಲ್ಲಿ ಸಾಹಿತ್ಯ ಚರಿತ್ರೆಯ ಬೆಳವಣಿಗೆಯ ಕ್ರಮಗಳನ್ನು ಗುರುತಿಸುವಾಗ ಅನೇಕ ವಿಮರ್ಶೆಯ ಮಾತುಗಳು ಬಂದಿವೆ.

ಇವೆಲ್ಲವೂ 'ಸಮಗ್ರ' ನೆಲೆಯ ಅಧ್ಯಯನಗಳಾದುದರಿಂದ ನಿರ್ದಿಷ್ಟವಾಗಿ ಸಾಹಿತ್ಯ ಚರಿತ್ರೆಯನ್ನು ರೂಪಿಸಿದ ಪಠ್ಯಗಳನ್ನೇ ಮುಖ್ಯ ಆಕರಗಳನ್ನಾಗಿಟ್ಟುಕೊಂಡು ನಡೆದ ಅಧ್ಯಯನಗಳು. ಕೆ.ಎಂ. ಮ್ಯಾಥ್ಯೂ ಮತ್ತು ಎಂ.ಎಂ. ಕಲಬುರ್ಗಿಯವರದ್ದು ಈ ಮಟ್ಟಿಗೆ ಉಲ್ಲೇಖಿಸಬಹುದಾದ ಕೆಲಸಗಳು. ಈ ಅಧ್ಯಯನವು ಈಗಾಗಲೇ ಸಾಹಿತ್ಯ ಚರಿತ್ರೆಯನ್ನು ಕುರಿತ ಹಾಗೆ ರೂಪಿತವಾದ

ಗ್ರಹೀತಗಳನ್ನು ಪ್ರಶ್ನೆಗೆ ಒಳಪಡಿಸುತ್ತಾ ಈ ನಾಲ್ಕು ಜನ ವಿದ್ವಾಂಸರ ಸಾಹಿತ್ಯ ಚರಿತ್ರೆಯ ಕುರಿತು ಆಳವಾಗಿ ವಿಶ್ಲೇಷಿಸುವ ಕೆಲಸವನ್ನು ಮಾಡುತ್ತದೆ.

ಒಟ್ಟಿನಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ಉಗಮದ ಹಿಂದಿನ ಮನೋಧರ್ಮಗಳನ್ನು ಭಿನ್ನ ಆಯಾಮಗಳಿಂದ ಶೋಧಿಸುತ್ತಾ, ಕನ್ನಡ ಸಾಹಿತ್ಯ ಚರಿತ್ರೆ ವಸಾಹತುಶಾಹಿ ಕಾಲದ ಕೊಡುಗೆಯಾಗಿ ಪರಿಭಾವಿಸಿ, ಈ ಪರಿಕಲ್ಪನೆಯ ಉಗಮದ ಹಿಂದಿನ ತಾತ್ವಿಕ ಕಾರಣಗಳಲ್ಲಿ ಹುಡುಕುವ ಮಾದರಿಯಲ್ಲಿ ಈ ಅಧ್ಯಯನ ನಡೆಯುತ್ತದೆ.

# ಅಧ್ಯಾಯ ಎರಡು

## ೨.೦ ಸಾಹಿತ್ಯ ಚರಿತ್ರೆಯ ಸ್ವರೂಪ, ವ್ಯಾಖ್ಯಾನ.

೨.೧ ಪ್ರವೇಶ

೨.೨ ಸಾಹಿತ್ಯ ಚರಿತ್ರೆಯ ಸ್ವರೂಪ ಗ್ರಹಿಕೆ

೨.೩ ಸಾಹಿತ್ಯ ಚರಿತ್ರೆಯ ವ್ಯಾಖ್ಯಾನ

# ೨. ಸಾಹಿತ್ಯ ಚರಿತ್ರೆಯ ಸ್ವರೂಪ, ವ್ಯಾಖ್ಯಾನ

## ೨.೧ ಪ್ರವೇಶ:

ಸಾಹಿತ್ಯ ಚರಿತ್ರೆ ಒಂದು ಜ್ಞಾನ ರೂಪ. ಸಾಹಿತ್ಯ ಚರಿತ್ರೆಯ ಮೂಲಕ ಒಂದು ಕಾಲದ ಸಾಹಿತ್ಯ ತನ್ನ ಸಮಕಾಲೀನತೆಯನ್ನು ಪುನರ್ ಪಡೆಯುತ್ತದೆ. ಹೀಗೆ ಮರು ಕಟ್ಟುವ ಬಗೆ, ಸಾಹಿತ್ಯ ಚರಿತ್ರಕಾರ ಸಾಹಿತ್ಯ ಚರಿತ್ರೆಯನ್ನು ಗ್ರಹಿಸಿದ ಆಧಾರದಲ್ಲಿ ರೂಪ ಪಡೆಯುತ್ತದೆ. ಸಾಹಿತ್ಯ ಕೃತಿಯೇ ಒಂದು ಭಾಷಿಕ ರೂಪ. ಈ ಭಾಷಿಕ ರಚನೆಯನ್ನು ಒಂದು ಸಾಹಿತ್ಯ ಚರಿತ್ರೆಯ ಮಾದರಿಯಲ್ಲಿ ಕಾಲಾನುಕ್ರಮಣಿಕೆಯಲ್ಲಿ ಕಟ್ಟುವಾಗ ಆ ಚರಿತ್ರೆಯಲ್ಲಿ ಒಬ್ಬ ಕವಿ, ಒಂದು ಕೃತಿ, ಒಂದು ನಿರ್ದಿಷ್ಟ 'ಅವಕಾಶ'ವನ್ನು ಪಡೆಯುತ್ತದೆ. ಈ 'ಅವಕಾಶ' ಎನ್ನುವುದು ಕೃತಿಯಿಂದ ಕೃತಿಗೆ, ಕವಿಯಿಂದ ಕವಿಗೆ ಬದಲಾಗುತ್ತಾ ಹೋಗುತ್ತದೆ. ಸಾಹಿತ್ಯ ಚರಿತ್ರಕಾರ ಆ ಕೃತಿ ಅಥವಾ ಕವಿಯನ್ನು ಹೇಗೆ ಗ್ರಹಿಸಿದ್ದಾರೆ ಎನ್ನುವ ಆಧಾರದಲ್ಲಿ ಈ ಅವಕಾಶ ಬದಲಾಗುತ್ತಾ ಹೋಗುತ್ತದೆ. ಆ ಕವಿ ಅಥವಾ ಕೃತಿ ಮುಖ್ಯ ಎಂದು ಪರಿಗಣಿಸಿದರೆ ಸಿಗುವ ಅವಕಾಶ ಮತ್ತು ಸಾಧಾರಣ ಎಂದು ಪರಿಗಣಿಸಿದಾಗ ಸಿಗುವ ಅವಕಾಶದಲ್ಲಿ ವ್ಯತ್ಯಾಸ ಇದೆ.

ಈ ಸಂಪ್ರಬಂಧದಲ್ಲಿ ಈವರೆಗಿನ ಸಾಹಿತ್ಯ ಚರಿತ್ರೆಯ ಕಟ್ಟುವಿಕೆಯ ಕ್ರಮವನ್ನು ಅವಲೋಕಿಸಿ, ಅದರ ಮೂಲಕ ಸಾಹಿತ್ಯ ಚರಿತ್ರೆಯ ರಚನೆಯ ಸ್ವರೂಪವನ್ನು ವಿವರಿಸಲಾಗುತ್ತದೆ. ಮತ್ತು ಸಾಹಿತ್ಯ ಚರಿತ್ರೆಗೆ ಈಗಾಗಲೇ ನೀಡಿರುವ ವ್ಯಾಖ್ಯಾನಗಳನ್ನು ಪರಿಶೀಲಿಸಲಾಗುವುದು.

ಸಾಮಾನ್ಯವಾಗಿ ಸಾಹಿತ್ಯ ಚರಿತ್ರೆಯ ಕಟ್ಟುವಿಕೆಯನ್ನು ಅದರ ಆಂತರ್ಯವನ್ನೇ ಪ್ರವೇಶಿಸಿ ನೋಡುವುದಾದರೆ, ಈ ಸಾಹಿತ್ಯ ಚರಿತ್ರೆಯ ಮಾದರಿಗಳು, ಒಂದು ನಿರ್ದಿಷ್ಟ ಕಾಲಮಾನದಿಂದ ಹೊರಟು ಮತ್ತೆ ಒಂದು ನಿರ್ದಿಷ್ಟ ಕಾಲಮಾನದಲ್ಲಿ ಮುಕ್ತಾಯಗೊಳ್ಳುವ ಸ್ವರೂಪದಲ್ಲಿದೆ. ಮತ್ತೊಂದು ಬಗೆ ಒಂದು ನಿರ್ದಿಷ್ಟ ಮತೀಯ ಕವಿಗಳಿಂದ ಬರವಣಿಗೆ ಪ್ರಾರಂಭವಾಗಿ ಅದು ಮುಂದೆ ಬೆಳೆದು ಆ ಮತೀಯ ಕವಿಗಳ ಬರವಣಿಗೆ ಕುಂಠಿತವಾಗಿ ಇನ್ನೊಂದು ಮತದ ಪ್ರಾಬಲ್ಯ ಹೇಗೆ ಬೆಳೆದು ಬಂದಿದೆ ಎಂಬ ರೀತಿಯಲ್ಲಿದೆ. ಮುಂದೆ ಇನ್ನೊಂದು ಮಾದರಿ ಒಬ್ಬ ಪ್ರಮುಖ ಕವಿಯು ಬಂದು ಹೋದ ನಂತರ ಆತನ ಪ್ರಭಾವಲಯದಲ್ಲಿ ಮುಂದಿನ ಅನೇಕ ದಶಕ ಅಥವಾ ಶತಮಾನವೇ ಹೇಗೆ ಸೇರಿಕೊಂಡಿದೆ ಎಂಬುದನ್ನು ಹೇಳುವ ಬಗೆಯನ್ನು ಕಾಣಬಹುದು. ಈ ಹಿನ್ನೆಲೆಯಿಂದ ಈ ಅಧ್ಯಾಯವನ್ನು ಎರಡು ಭಾಗಗಳಾಗಿ ವಿಂಗಡಿಸಿ ನೋಡಲಾಗುವುದು.

## ೨.೨ ಸಾಹಿತ್ಯ ಚರಿತ್ರೆಯ ಸ್ವರೂಪ ಗ್ರಹಿಕೆ

ಕನ್ನಡ ಭಾಷೆಯ ಸಾಹಿತ್ಯದ ಚರಿತ್ರೆಯನ್ನು ಕಟ್ಟಬೇಕಾದ ಸಂದರ್ಭದಲ್ಲಿ ಮುಖ್ಯವಾಗಿ ನಮಗೆ ಬೇಕಾದುದು ಚರಿತ್ರೆಯನ್ನು ಕಟ್ಟುವುದಕ್ಕೆ ಆಧಾರವಾಗಬಲ್ಲ ಕೆಲವು ನಿರ್ಧಿಷ್ಟತೆಗಳು. ಚರಿತ್ರೆಯನ್ನು ಕಟ್ಟುವುದಕ್ಕೆ ಮುಖ್ಯವಾಗಿ ನಮ್ಮ ಸಾಹಿತ್ಯ ಚರಿತ್ರಕಾರರು ಕವಿಯ ಹೆಸರು, ಕಾಲ, ಮತ, ನಂಬಿಕೆ, ಕೃತಿಗಳ ವಿವರವನ್ನು ಬಯಸಿದ್ದಾರೆ. ಹೀಗೆ ನಿರ್ದಿಷ್ಟ ಹಾಗೂ ನಿಖರವಾಗಿ ಇರಬೇಕೆಂದು ಬಯಸುವುದು ಒಂದು ವಿಜ್ಞಾನದ ಮಾದರಿಯೇ ಆದರೂ ನಮ್ಮ ಮುಖ್ಯ ಸಾಹಿತ್ಯ ಚರಿತ್ರೆಕಾರರೆಲ್ಲ ಈ ಕಾಲ, ಮತ ಕೃತಿಗಳ ನಿಖರತೆಯನ್ನು ಶೋಧಿಸುವುದಕ್ಕಾಗಿ ತಮ್ಮ ಬಹು ಸಮಯವನ್ನು ವ್ಯಯ ಮಾಡಿರುವುದನ್ನು ನೋಡುತ್ತೇವೆ.

ಸಾಹಿತ್ಯ ಚರಿತ್ರೆಯ ಸ್ವರೂಪವನ್ನು ಕುರಿತಂತೆ ಡಿ.ಎಲ್ ನರಸಿಂಹಾಚಾರ್ಯ ಹೀಗೆ ಹೇಳುತ್ತಾರೆ "ಒಂದು ಭಾಷೆಯಲ್ಲಿ ಹುಟ್ಟಿರುವ ಸಾಹಿತ್ಯ ರಾಶಿಯ ಅಭ್ಯಾಸವನ್ನು ಅಮೂಲಾಗ್ರವಾಗಿ ಕೈಕೊಳ್ಳುವವರು ಒಂದು ಕ್ರಮವನ್ನು ಹಿಡಿಯಬೇಕಾಗುತ್ತದೆ. ಆ ಸಾಹಿತ್ಯ ಹೇಗೆ ಆರಂಭವಾಗಿ ಕಾಲಕಾಲಕ್ಕೆ ಹೇಗೆ ಬೆಳೆದು ಬಂದಿದೆ ಎಂಬುದನ್ನು ಸ್ಪಷ್ಟವಾಗಿ ತಿಳಿಯಬೇಕು. ಕಾಲಧರ್ಮಕ್ಕನುಗುಣವಾಗಿ ಅದರಲ್ಲಿ ಆಗಿರುವ ವ್ಯತ್ಯಾಸಗಳು, ಅವಕ್ಕೆ ಕಾರಣಗಳು, ಅವುಗಳಿಂದ ಸಾಹಿತ್ಯ ಕಲೆಗೆ ಆಗಿರುವ ಪ್ರಯೋಜನಗಳು ಮುಂತಾದ ಅನೇಕ ವಿಷಯಗಳು ವಿಚಾರಕ್ಕೆ ಒಳಪಡುತ್ತವೆ. ಸಾಹಿತ್ಯವನ್ನು ಸೃಷ್ಟಿಸಿರುವ ಕವಿಗಳ ಕಾಲ ಮತ್ತು ಅವು ರಚಿತವಾದ ಸಂದರ್ಭ ಸನ್ನಿವೇಶಗಳು ಇವುಗಳ ಪರಿಜ್ಞಾನ ಸಾಹಿತ್ಯ ಚರಿತ್ರೆಗೆ ಮೂಲಾಧಾರ."[೧] ಸಾಹಿತ್ಯ ಚರಿತ್ರೆಯ ಸ್ವರೂಪವನ್ನು ಬಹಳ ನಿರ್ದಿಷ್ಟವಾಗಿ, ಸ್ಪಷ್ಟವಾಗಿ ಇಲ್ಲಿ ಗುರುತಿಸಲಾಗಿದೆ. ಮುಖ್ಯವಾಗಿ ಇಲ್ಲಿ ಗಮನಿಸಬೇಕಾದುದು ಒಂದು ಸಾಹಿತ್ಯ ಪರಂಪರೆಯ ವಿಕಾಸವನ್ನು ಗುರುತಿಸುವುದು. ಸಾಹಿತ್ಯ ಚರಿತ್ರೆಯ ಬಹುಮುಖ್ಯವಾದ ಒಂದು ಕಾರ್ಯ ಇದು. ಯಾವುದೇ ಒಂದು ಕಾಲದಲ್ಲಿ ಶ್ರೇಷ್ಠ ಕೃತಿಯೊಂದು ರಚನೆಯಾಗಿದ್ದರೆ, ಅಥವಾ ಬಹಳ ದೀರ್ಘ ಕಾಲ ಮೌಲ್ಯಯುತ ಕೃತಿಯೇ ಬಂದಿಲ್ಲವಾದರೆ ಅದಕ್ಕೆ ಕಾರಣಗಳನ್ನು ಇಲ್ಲಿ ಗುರುತಿಸಲು ಸಾಧ್ಯವಾಗುತ್ತದೆ. ಕವಿಗಳ ಕಾಲ ಮತ್ತು ಜೀವನ ವಿವರ, ಗ್ರಂಥಗಳ ಕಾಲ ಮತ್ತು ರಚಿತವಾದ ಸಂದರ್ಭ ಸನ್ನಿವೇಶಗಳು ಎಷ್ಟೆಷ್ಟು ಖಚಿತವಾಗಿ ತಿಳಿದು ಬರುತ್ತದೋ, ಅಷ್ಟಷ್ಟು ಸಮರ್ಪಕವಾಗಿ ಸಾಹಿತ್ಯ ಚರಿತ್ರೆಯನ್ನು ಬರೆಯಲು ಸಾಧ್ಯವಾಗುತ್ತದೆ.

ಸಾಹಿತ್ಯದ ಬೆಳವಣಿಗೆಯನ್ನು ಚರಿತ್ರೆಯ ರೂಪದಲ್ಲಿ ಪ್ರತಿಪಾದಿಸುವಾಗ ನಿರ್ದಿಷ್ಟವಾದ ಕಾಲಕ್ರಮವನ್ನು ಅವಲಂಬಿಸಿ ಸಾಗಬೇಕಾಗುತ್ತದೆ. ಅದರ ಅಭ್ಯಾಸವನ್ನು ನಡೆಸುವವರೂ ಇದೇ ಕ್ರಮದಲ್ಲಿ ಮುಂದುವರಿಯಬೇಕಾಗುತ್ತದೆ. ನಮ್ಮ ಪ್ರಾಚೀನ ಸಾಹಿತ್ಯಕಾರರು ತಮ್ಮ ಬಗ್ಗೆ

ಹೇಳಿಕೊಂಡಿರುವುದು ತುಂಬಾ ಕಡಿಮೆ. ಕೆಲವರು ಅಲ್ಪಸ್ವಲ್ಪ ಹೇಳಿಕೊಂಡಿದ್ದಾರೆ. ಕೆಲವರು ಹೆಸರು ಮಾತ್ರ ಹೇಳಿದ್ದಾರೆ. ಹೆಸರೂ ಹೇಳಿಕೊಳ್ಳಲು ಇಷ್ಟಪಡದ ಲೇಖಕರೂ ಇದ್ದಾರೆ. "ಕನ್ನಡ ಸಾಹಿತ್ಯ ಚರಿತ್ರೆಕಾರನಿಗೆ ಮೂಲ ಸಾಮಗ್ರಿಯ ಅಭಾವ ಎಷ್ಟಿದೆಯೆಂದರೆ ಗ್ರಂಥಕರ್ತನ ಹೆಸರು ಕೂಡ ದೊರೆಯದೆ ಎಷ್ಟೋ ವೇಳೆ ಅವನು ನಿರಾಶನಾಗಿ ಬಾಯಿ ಕಟ್ಟಿ ಮೌನಿಯಾಗಿರಬೇಕಾದಷ್ಟು ಉಂಟು"[3] ಎಂಬ ಡಿ.ಎಲ್.ಎನ್ ಅವರ ಮಾತು ಅಕ್ಷರಶ: ಸತ್ಯವಾಗಿದೆ. ಈ ಕೊರತೆಯಿಂದಾಗಿ ಯಾವ ಚರಿತ್ರೆಯನ್ನೂ ಅಧಿಕೃತವಾಗಿ ನಿರೂಪಿಸಲು ಸಾಧ್ಯವಾಗಿಲ್ಲ.

ಹಾ.ಮಾ. ನಾಯಕರು ಸಾಹಿತ್ಯ ಚರಿತ್ರೆಗೆ ಒದಗುವ ಸಾಧನಗಳ ಕುರಿತು ಹೀಗೆ ಹೇಳುತ್ತಾರೆ. "ಸಾಹಿತ್ಯ ಚರಿತ್ರೆಕಾರನಿಗೆ ಸಾಹಿತ್ಯ ಚರಿತ್ರೆಯನ್ನು ನಿರೂಪಿಸಲು ಮುಖ್ಯವಾಗಿ ಒದಗುವ ಸಾಧನಗಳು ಎರಡು ಬಗೆಯವು. ಒಂದು ಆಂತರಿಕ, ಇನ್ನೊಂದು ಬಾಹ್ಯ. ಆಂತರಿಕ ಸಾಧನ ಒಂದು ಪಠ್ಯದಲ್ಲಿಯೇ ದೊರೆಯುವ ಅಂಶಗಳನ್ನು ಆಧರಿಸಿರುತ್ತದೆ. ಬಾಹ್ಯ ಸಾಧನ ಹೊರಗಿನ ಹಲವು ಅಂಶಗಳನ್ನು ಅವಲಂಬಿಸಿರುತ್ತದೆ. ಕವಿಯ ಕಾಲ ದೇಶ ಜೀವನ ಸಾಧನೆಗಳನ್ನು ನಿರ್ಣಯಿಸುವಲ್ಲಿ ನಮಗೆ ಪ್ರತಿಯೊಂದು ಸಾಧನವೂ ಅಗತ್ಯವಾಗುತ್ತದೆ."[4] ಈ ನೆಲೆಯಿಂದ ನಮ್ಮ ಸಾಹಿತ್ಯ ಚರಿತ್ರೆಯನ್ನು ನೋಡಿದರೆ, ಲಭ್ಯವಾದ ಬಾಹ್ಯ ಸಾಧನಗಳನ್ನು ಬಹಳ ಗರಿಷ್ಠವಾಗಿ ಬಳಸಿಕೊಂಡಿದೆ. ಕನ್ನಡದಲ್ಲಿ ಬಂದ ಬೇರೆ ಬೇರೆ ಸಾಹಿತ್ಯ ಚರಿತ್ರೆಯ ಕೃತಿಗಳು ಈ ಸಾಹಿತ್ಯ ಚರಿತ್ರೆಯ ಸ್ವರೂಪವನ್ನು ಭಿನ್ನಭಿನ್ನವಾಗಿ ಪರಿಕಲ್ಪಿಸಿಕೊಂಡಿದೆ. ಹೀಗೆ ಭಿನ್ನವಾಗಿ ಆಲೋಚಿಸಿದ್ದರ ಪರಿಣಾಮವಾಗಿಯೇ ಅನೇಕ ಮಾದರಿಯ ಸಾಹಿತ್ಯ ಚರಿತ್ರೆಯ ಸಂಪುಟಗಳು ಬಂದಿದೆ. ಬಹಳ ಪ್ರಾರಂಭದಲ್ಲಿ ಬಂದ ಕಿಟ್ಟೆಲ್ಲರ 'Old Canarese Literature' ನಿಂದ ತೊಡಗಿ, ರಂ. ಶ್ರೀ ಮುಗಳಿ, ಬೆಂಗಳೂರು ವಿ.ವಿ ಸಂಪುಟ, ಮೈಸೂರು ವಿ.ವಿ. ಸಂಪುಟ, ಡಾ। ವೆಂಕಟಸುಬ್ಬಯ್ಯನವರ ಬರವಣಿಗೆ, ಸಿ. ವೀರಣ್ಣನವರ ಬರವಣಿಗೆಯವರೆಗೂ ಸಾಹಿತ್ಯ ಚರಿತ್ರೆಯ ಸ್ವರೂಪವನ್ನು ವಿಶ್ಲೇಷಿಸಿದ್ದಾರೆ.

"ಕನ್ನಡ ಸಾಹಿತ್ಯ ಚರಿತ್ರೆಗೆ ಯಾವುದೇ ಭಾಷೆಯ ಸಾಹಿತ್ಯ ಚರಿತ್ರೆಗಿರುವ ಸಾಮಾನ್ಯ ಸ್ವರೂಪವಿದೆ. ಭಾರತೀಯ ಪ್ರಭಾವ ಮುದ್ರೆಯಿದೆ. ತನ್ನದೇ ಆದ ವಿಶಿಷ್ಟ ಸ್ವರೂಪವೂ ಇದೆ. ಅದಕ್ಕೆ ಸಾವಿರಾರು ವರ್ಷಗಳ ಅಖಂಡ ಪರಂಪರೆಯಿದೆ. ಸಾವಿರಾರು ಲೇಖಕರ ವೈವಿಧ್ಯಪೂರ್ಣವಾದ ಕಾಣಿಕೆಯಿದೆ. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಸಮಗ್ರ ದರ್ಶನವಾಗಬೇಕಾದರೆ, ಈ ಎಲ್ಲ ಮಗ್ಗುಲಿನತ್ತ ಕ್ಷ ಕಿರಣವನ್ನು ಬೀರಿ ಬಿಡಿಯಾಗಿ ಇಡಿಯಾಗಿ ಮಾತಿನಲ್ಲಿ ಮೂಡಿಸಬೇಕಾಗುತ್ತದೆ. ಪ್ರಾರಂಭದಿಂದ ಉಪಲಬ್ಧವಾದ ಎಲ್ಲ ಸಾಮಗ್ರಿಗಳನ್ನು ಬಳಸಿಕೊಂಡು ಚಾರಿತ್ರಿಕವಾಗಿ ಅದರ

ಕೂಲಂಕಷವಾದ ವಿವೇಚನೆ ಮಾಡಿ ವಿಮರ್ಶಾತ್ಮಕ ದೃಷ್ಟಿಯಿಂದ ಅದನ್ನು ತೂಗಿ ಬೆಲೆ ಕಟ್ಟುವುದು ಈ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಸಂಕಲ್ಪಿತ ಸ್ವರೂಪವಾಗಿದೆ"[೮] ಎಂದು ಜಿ.ಎಸ್. ಶಿವರುದ್ರಪ್ಪನವರು ತಾವು ನಿರೂಪಿಸುವ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಸ್ವರೂಪವನ್ನು ಹೇಳಿಕೊಳ್ಳುತ್ತಾರೆ. ಸಾಹಿತ್ಯ ರಚನೆಗೆ ಇರುವ ಒಂದು ಅಖಂಡ ಪರಂಪರೆಯನ್ನು ಸಾಹಿತ್ಯ ಚರಿತ್ರೆಕಾರ ಬಿಡಿಬಿಡಿಯಾಗಿ ತನ್ನ ಗ್ರಹಿಕೆಯ ಅನುಕೂಲಕ್ಕಾಗಿ ವಿಭಜಿಸಿಕೊಂಡದ್ದು ಸರಿಯಷ್ಟೇ. ಆದರೆ ಒಟ್ಟು ಸಾಹಿತ್ಯ ಚರಿತ್ರೆ ಸಾಹಿತ್ಯವನ್ನು ಇಡಿಯಾಗಿ ಗ್ರಹಿಸಿಕೊಂಡು ವ್ಯಾಖ್ಯಾನಿಸಿದ್ದು ಬಹಳ ಕಡಿಮೆ. ಕಾಲದ ನೆಲೆಯಿಂದ, ಮತದ ನೆಲೆಯಿಂದ ಮಾಡಿಕೊಂಡ ಸಾಹಿತ್ಯ ಚರಿತ್ರೆಯ ವಿಭಜನೆಯಿಂದ ಸಾಹಿತ್ಯದ ಬೆಳವಣಿಗೆಯನ್ನು ಸೂಕ್ಷ್ಮವಾಗಿ ನೋಡಲು ಸಾಧ್ಯವಾಗಬೇಕಾಗಿತ್ತು. ಆದರೆ ಅದು ಕೇವಲ ವಿವರಣೆಯ ಮಟ್ಟಕ್ಕೆ ನಿಂತುಬಿಟ್ಟಿದ್ದು ಕಾಣುತ್ತದೆ. ಹೀಗಾಗಿ ಕೇವಲ ವಿವರಣೆಯ ಮಟ್ಟದಲ್ಲೇ ನಿಂತ ಸಾಹಿತ್ಯ ಚರಿತ್ರೆಯನ್ನು ನೋಡುತ್ತೇವೆ. ಕನ್ನಡ ಅಧ್ಯಯನ ಸಂಸ್ಥೆಯ ಸಾಹಿತ್ಯ ಚರಿತ್ರೆ ಸಂಪುಟದಲ್ಲಿ ಹೀಗೊಂದು ವಿವರಣೆಯಿದೆ. "ಕ್ರಿ.ಶ 1350ರಿಂದ ಕ್ರಿ.ಶ 1500ರವರೆಗೆ ತೆಲುಗು ಸಾಹಿತ್ಯವನ್ನು ಶ್ರೀನಾಥ ಯುಗ ಎಂದು ಕರೆಯುವರು. ಪಾಲ್ಕುರಿಕೆ ಸೋಮನಾಥನ ತರುವಾಯ ಕನ್ನಡನಾಡಿನೊಡನೆ ಹೆಚ್ಚು ಸಂಪರ್ಕವಿದ್ದ ಕವಿ ಎಂದರೆ ತೆಲುಗು ಭಾಷೆಯ ಕವಿ ಸಾರ್ವಭೌಮನಾದ ಶ್ರೀನಾಥ. ವಿಜಯನಗರದ 2ನೇಯ ಹರಿಹರನ ಕಾಲದಲ್ಲಿ ರತ್ನ ಭಾಂಡಾರಿ ತಿಪ್ಪರಸನ ಮಗ ವಿನುಕೊಂಡ ವಲ್ಲಭಾಮಾತ್ಯನು ಬರೆದ 'ಕ್ರೀಡಾಭಿರಾಮಮು' ಎಂಬ 'ವೀಥಿ ನಾಟಕ'ದಲ್ಲಿ ಶ್ರೀನಾಥನ ಕೈವಾಡವೂ ಇರುವಂತೆ ತೋರುತ್ತದೆ. ವಿಜಯನಗರದ ಪ್ರೌಢ ದೇವರಾಯನಿಂದ ಕನಕಾಭಿಷೇಕವನ್ನು ಪಡೆದ ಶ್ರೀನಾಥ ತೆಲುಗಿನಲ್ಲಿ 'ಶೃಂಗಾರ ನೈಷಧಮು, ಕಾಶೀಖಂಡಮು' 'ಭೀಮಖಂಡಮು' ಮುಂತಾದ ಗ್ರಂಥಗಳನ್ನು ಬರೆದಿದ್ದಾನೆ."[೯] ಇದು ಈ ವಿವರಣೆಗೆ ಮಾತ್ರ ಸೀಮಿತವಾಗಿರು ಮಾದರಿಗೆ ಒಂದು ಉದಾಹರಣೆಯಷ್ಟೆ.

ಸಾಹಿತ್ಯ ಚರಿತ್ರೆಯಲ್ಲಿ ಮತೀಯ ದೃಷ್ಟಿ ಪ್ರಧಾನವಾಗಿರುವುದನ್ನು ನೋಡಿದರೆ, ಒಬ್ಬ ಕವಿಯನ್ನು ಮತೀಯ, ದೃಷ್ಟಿಯಿಂದ ಅಳೆಯುವುದರಿಂದ ಅವನ ಕಾವ್ಯ ಮಹತ್ವವನ್ನು ಕಂಡಂತಾಗುವುದಿಲ್ಲ. ಕವಿಯ ಜೀವನ ದರ್ಶನ ಅವನ ಅನುಭವದ ಆಧಾರದ ಮೇಲೆ ನಿಂತಿರುತ್ತದೆ. ಮೊದಲ ಘಟ್ಟದ ಸಾಹಿತ್ಯ ಚರಿತ್ರೆಕಾರರಾದ ಇ.ಪಿ. ರೈಸ್, ಎಫ್. ಕಿಟ್ಟೆಲ್, ಆರ್.ನರಸಿಂಹಾಚಾರ್ಯ ಇವರೆಲ್ಲರೂ ಸಾಹಿತ್ಯ ಚರಿತ್ರೆಯನ್ನು ಈ ನೆಲೆಯಿಂದಲೇ ಗ್ರಹಿಸಿಕೊಂಡಿರುವುದನ್ನು ಕಾಣುತ್ತೇವೆ. ಕಾವ್ಯದ ಸ್ವರೂಪದಲ್ಲಿ ಎದ್ದು ಕಾಣುವ ಮತೀಯ ವಿವರಗಳು ಈ ವಿಭಜನೆಗೆ ಮುಖ್ಯ ಕಾರಣವಾಗಿರಬಹುದು. ಆದರೆ ಇದೇ ಸಂಗತಿ ಒಟ್ಟು ಸಾಹಿತ್ಯ ಚರಿತ್ರೆಯನ್ನು ವಿಭಜಿಸುವ ಮತ್ತು ಗ್ರಹಿಸುವ ನೆಲೆಯಿಂದ ಮುಖ್ಯ ಅಂಶವಾದುದು ವಿಶೇಷ.

ಆಧುನಿಕ ಸಂದರ್ಭದಲ್ಲಿ ಮುದ್ರಣ ಯಂತ್ರಗಳು, ಅಧ್ಯಯನದ ಹೊಸ ಶಿಸ್ತುಗಳು ಪ್ರವೇಶವನ್ನು ಪಡೆದ ನಂತರ ಈ ಸಾಹಿತ್ಯ ಚರಿತ್ರೆಗಳು ಬಂದದ್ದು ವಿಶೇಷ. ಮುದ್ರಣ ಪೂರ್ವದಲ್ಲಿ ನಮ್ಮ ಸಾಹಿತ್ಯ ಕೃತಿಗಳು ಹಸ್ತ ಪ್ರತಿಯಲ್ಲಿ ತಾಳೆಗರಿಯಲ್ಲಿ ದೊರೆತಂತೆ ಸಾಹಿತ್ಯ ಚರಿತ್ರೆಯ ಪಠ್ಯಗಳು ಲಭ್ಯವಾಗಲಿಲ್ಲ. ಹೀಗೆ ಆಧುನಿಕತೆಯ ಪ್ರವೇಶದೊಂದಿಗೆ ಸಾಹಿತ್ಯ ಚರಿತ್ರೆ ಎನ್ನುವ ಹೊಸ ಜ್ಞಾನರೂಪವೊಂದು ಮೂಡಿತು. ಜೊತೆಗೆ ಒಂದು ಬಗೆಯ ಹಳಹಳಿಕೆಯೂ ಪ್ರಾರಂಭವಾಯಿತು. "ಅನೇಕ ಆಧುನಿಕ ಐರೋಪ್ಯ ಸಾಹಿತ್ಯಗಳ ಚರಿತ್ರೆಗೆ ದೊರೆಯುವ ಸಾಕ್ಷ್ಯಾಧಾರಗಳು ನಮಗೆ ದೊರೆಯುವುದಿಲ್ಲವಲ್ಲ ಎಂಬ ವ್ಯಥೆ ನಿರಾಶೆಗಳು ನಮ್ಮನ್ನು ಕಾಡುತ್ತವೆ. ಇವು ಅಪರಿಹಾರ್ಯವಾದ ದಾರಿದ್ರ್ಯ. ಆದರೆ ಮುಂದಿನ ಚರಿತ್ರೆಕಾರನಿಗೆ ಇಂದಿನ ಸಾಹಿತ್ಯದ ಬಗೆಗೆ ಅಗತ್ಯವಾದ ಮಾಹಿತಿಗಳ ಸಿದ್ಧತೆ ರಕ್ಷಣೆಗಳು ನಮ್ಮ ಪಾಲಿನ ಜವಾಬ್ದಾರಿಯಾಗಿದೆ ಎಂಬುದನ್ನು ನಾವು ಮರೆಯಬಾರದು. ಇದುವರೆಗೂ ನಮ್ಮ ಪಾಲಿಗೆ ಇಲ್ಲವಾದ ಚಾರಿತ್ರಿಕ ದೃಷ್ಟಿಯನ್ನು ನಾವು ಇನ್ನಾದರೂ ಬೆಳೆಸಿಕೊಳ್ಳಬೇಕು."[೬] ಎಂದು ಹೇಳುವ ಹಾ.ಮಾ. ನಾಯಕರ ಮಾತಿನಲ್ಲಿ ಅಂತಹ ಹಳಹಳಿಕೆ ಇದೆ. ಈ ಬಗೆಯ ಹಳಹಳಿಕೆಯೇ ನಮ್ಮ ದೇಶೀಯ ವಿದ್ವಾಂಸರಲ್ಲಿ ಸಾಹಿತ್ಯ ಚರಿತ್ರೆಯ ಕಟ್ಟುವಿಕೆಯ ಪ್ರೇರಣೆಯನ್ನು ಹುಟ್ಟು ಹಾಕಿಸಿದ್ದು.

ಈ ಹಿನ್ನೆಲೆಯಲ್ಲಿ ಮಿಷನರಿ ಕಾಲಘಟ್ಟದಲ್ಲಿ ಎಫ್. ಕಿಟ್ಟೆಲ್, ಇ.ಪಿ.ರೈಸ್ ಇವರಿಂದ ರಚನೆಯಾದ ಸಾಹಿತ್ಯ ಚರಿತ್ರೆ ಮೊದಲ ಘಟ್ಟದ ಪ್ರಯತ್ನಗಳಾಗಿ ವಿಶೇಷ ಎಂದೇ ಉಲ್ಲೇಖಿಸಬೇಕಾಗುತ್ತದೆ. ಆದರೆ ನಂತರದ ಕಾಲದಲ್ಲಿ ಸಾಹಿತ್ಯ ಚರಿತ್ರೆ ಬೆಳೆದ ಅಗಾಧತೆಯನ್ನು ನೋಡಿದರೆ ಇದೊಂದು ಕೋಶ ಮಾದರಿಯ ಸಾಹಿತ್ಯ ಚರಿತ್ರೆ ಎಂದು ಹೇಳಬೇಕಾಗುತ್ತದೆ. ಮುಖ್ಯವಾದ ಕಾರಣವೆಂದರೆ, ಈ ಸಾಹಿತ್ಯ ಚರಿತ್ರೆಯಲ್ಲಿ ಸಾಮಗ್ರಿ ಬಾಹುಳ್ಯವಿಲ್ಲ. ಆದರೆ ಇದು ದೋಷ ಅಲ್ಲ.

ಇ.ಪಿ. ರೈಸ್ ಸಾಹಿತ್ಯ ಚರಿತ್ರೆಯನ್ನು ನಿರೂಪಿಸುವಾಗ ಅವರ ಬರವಣಿಗೆ ಸಾಹಿತ್ಯ ಚರಿತ್ರೆಯ ಮೇಲು ನೋಟದ ಗ್ರಹಿಕೆಯನ್ನು ಹೇಳುತ್ತದೆ. ಇಲ್ಲಿಯ ದೇಶೀಯ ಸಾಹಿತ್ಯ ಕೃತಿಗಳು ಮತೀಯವೂ, ಬೇರೊಂದು ಲೋಕವನ್ನು ಕುರಿತವುಗಳೂ ಆಗಿದ್ದವೆಂಬ ತಪ್ಪು ಕಲ್ಪನೆಯಿಂದ, ಸಂಸ್ಕೃತಿಯ ಅಧ್ಯಯನದಿಂದ ಅವುಗಳನ್ನು ದೂರವಿಟ್ಟರು. ಕನ್ನಡ ಸಾಹಿತ್ಯದ ಬಗ್ಗೆ ರೈಸರು ಬರೆದ ಚರಿತ್ರೆಯಲ್ಲಿ ಅದರ ಲಕ್ಷಣವನ್ನು ಕುರಿತು ವಿವರಿಸುವಾಗ ಇದೇ ಬಗೆಯ ಅಭಿಪ್ರಾಯಗಳನ್ನು ಮುಖ್ಯವಾಗಿ ಕೊಟ್ಟರೆಂಬುದನ್ನು ಗಮನಿಸಬಹುದಾಗಿದೆ. ಸಾಹಿತ್ಯದ ದೃಷ್ಟಿಯಿಂದಲೂ, ಸಮಾಜದ ದೃಷ್ಟಿಯಿಂದಲೂ ಅಂತಹ ಬೆಲೆಬಾಳುವ ಕೊಡುಗೆಯನ್ನೇನೋ ಕನ್ನಡ ಸಾಹಿತ್ಯವು ಕೊಟ್ಟಿಲ್ಲವೆನ್ನುವ ಮಾತು ಸಾರಾಸಗಟಾದ ನಿರ್ಣಯವನ್ನೇ ಸ್ಪಷ್ಟವಾಗಿ ಹೇಳಿದಂತಾಗಿದೆ. ಸಾಹಿತ್ಯ ಕೃತಿಗಳನ್ನು

ಕುರಿತಾದ ಇವರ ಗ್ರಹಿಕೆಗಳು ಕಾವ್ಯಗಳ ಆಳವಾದ ಅಧ್ಯಯನದಿಂದ ನಿರೂಪಿತವಾದದ್ದಾಗಿರಲಿಲ್ಲ. ಆದರೆ ಇದು ಆ ಕಾಲಘಟ್ಟದ ಅಧ್ಯಯನದ ಮಿತಿಯಷ್ಟೇ.

ಒಂದು ಸಾಹಿತ್ಯ ಕೃತಿಯಲ್ಲಿ ಚರಿತ್ರೆಯ ಸಂಗತಿಗಳು ದಾಖಲುಗೊಂಡಿರುತ್ತವೆ. ಕೃತಿಯೊಂದರ ಅಸ್ತಿತ್ವವೇ ಒಂದು ಚಾರಿತ್ರಿಕ ಸಂಗತಿ. ಕೃತಿಯೊಂದರ ಸೌಂದರ್ಯಾತ್ಮಕ ನಿಲುವುಗಳಲ್ಲಿ, ಅದರ ದರ್ಶನವಾಗಲಿ, ತನ್ನ ಗತಕಾಲದಲ್ಲಿನ ಅನಿವಾರ್ಯ ಸಂಬಂಧವನ್ನು ಪಡೆದಿರುವಂಥದ್ದು. ಹೀಗಾಗಿ ಕೃತಿಯನ್ನು ಅದು ರಚನೆಯಾದ ಕಾಲದಿಂದ ಪ್ರತ್ಯೇಕಗೊಳಿಸಿ ಅದನ್ನು 'ಸ್ವಯಂಸಿದ್ಧ' ರಚನೆ ಎಂದು ಓದುವುದು ಸಾಧ್ಯವಿಲ್ಲ. ಹೀಗಾಗಿ ಸಾಹಿತ್ಯ ಚರಿತ್ರೆಯೆನ್ನುವುದು ಒಂದು ಕಾಲದ ದಾರದಲ್ಲಿ ಕೃತಿಮಣಿಗಳನ್ನು ಪೋಣಿಸುವ ಕೆಲಸವಲ್ಲ. ಪ್ರತಿಯೊಂದು ಕೃತಿಯ ಮೂಲ ಸಾಮಗ್ರಿಗಳನ್ನು ಸೋಸುವುದು, ಆಧಾರವನ್ನು ಹುಡುಕುವುದು ಆ ಕೃತಿಯ ಪ್ರಭಾವವನ್ನು ಅಳೆಯುವ ಕೆಲಸವನ್ನು ಸಾಹಿತ್ಯ ಚರಿತ್ರೆ ಮಾಡಬೇಕಾಗುತ್ತದೆ.

ಸಾಹಿತ್ಯವನ್ನು ಒಂದು ಸಂಸ್ಕೃತಿಯ ಉತ್ಪನ್ನವಾಗಿ ಪರಿಗಣಿಸಬೇಕಾಗುತ್ತದೆ. ಸಾಹಿತ್ಯ ಚರಿತ್ರೆಕಾರ ಸಾಹಿತ್ಯ ಕೃತಿಯನ್ನು ಒಂದು ನಿರೂಪಣ ಸಾಕ್ಷ್ಯವಾಗಿಯೇ ಪರಿಗಣಿಸುತ್ತಾನೆ. ಒಂದು ಕಾಲದ ಸಾಂಸ್ಕೃತಿಕ ಪುನಾರಚನೆಗೆ ಮತ್ತು ಆ ಕಾಲದ ಸಾಂಸ್ಕೃತಿಕ ಒತ್ತಡದ ತಿಳುವಳಿಕೆಗಾಗಿ ಸಾಹಿತ್ಯ ಕೃತಿಯನ್ನು ಪ್ರವೇಶಿಸುತ್ತಾನೆ. ಸಾಹಿತ್ಯ ಕೃತಿಯೊಂದರ ಸೃಷ್ಟಿಯೆಂದರೆ, ಚಾರಿತ್ರಿಕ ಕ್ಷಣದ ಕಾಲದ ಸೃಷ್ಟಿಯೆಂದೇ ತಿಳಿಯುತ್ತಾನೆ. ಹೀಗಾಗಿ ಕೃತಿಯೊಂದನ್ನು ಓದುವಾಗ ಲೇಖಕನೊಬ್ಬನ ಸಾಂಸ್ಕೃತಿಕ ಗ್ರಹಿಕೆಗಳಿಂದ ನಾವು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

ಸಾಹಿತ್ಯ ಚರಿತ್ರೆಯು ಸಾಹಿತ್ಯದ ಬೆಳವಣಿಗೆಯನ್ನು ಗ್ರಹಿಸುವಾಗ ಸಾಹಿತ್ಯ ರೂಪ ಮತ್ತು ವಸ್ತುವಿನಲ್ಲಾಗುವ ಬದಲಾವಣೆಯನ್ನು ಚರಿತ್ರೆಕಾರ ತನ್ನ ಗ್ರಹಿಕೆಗೆ ತೆಗೆದುಕೊಂಡು ನಿರೂಪಿಸಬೇಕು. ಈ ರೂಪ ಮತ್ತು ವಸ್ತುವಿನ ಬದಲಾವಣೆ ಕೇವಲ ಆಕಸ್ಮಿಕ ಆಗಿರುವುದಿಲ್ಲ "ಸಾಹಿತ್ಯ ಚರಿತ್ರೆಯಲ್ಲಿ ಗಮನಾರ್ಹವಾದ ಮತ್ತೊಂದು ಮುಖ್ಯಾಂಶ ಕಾಲಕಾಲಕ್ಕೆ ಮಾರ್ಪಡುವ ಅಭಿರುಚಿ ವಿಶೇಷಗಳು. ಜನರಲ್ಲೂ, ಕವಿಗಳಲ್ಲೂ ಉತ್ತಮವಾದ ಅಭಿರುಚಿ ನೆಲೆಸಿದ್ದರೆ, ಅವರಿಂದ ರಚಿತವಾದ ಕಾವ್ಯಗಳೂ ಉತ್ಕೃಷ್ಟವಾಗಿರುತ್ತದೆ. ಒಂದು ಕಾಲದಲ್ಲಿ ರಸಕ್ಕೆ ಪ್ರಾಧಾನ್ಯವಿದ್ದರೆ ಮತ್ತೊಂದು ಕಾಲದಲ್ಲಿ ರೀತಿಗೆ ಪ್ರಧಾನತೆ ಬಂದು ಬಿಡುತ್ತದೆ. ಒಂದು ಕಾಲದವರಿಗೆ ವೀರರಸ ಇಷ್ಟವಾಗಿದ್ದರೆ ಇನ್ನೊಂದು ಕಾಲದವರಿಗೆ ಶೃಂಗಾರದಲ್ಲಿ ಮೆಚ್ಚುಗೆ ಉಂಟಾಗುತ್ತದೆ. ಹತ್ತನೆಯ ಶತಮಾನದ ಕನ್ನಡಿಗರಿಗೆ ವೀರರಸಕ್ಕಾಗರವಾದ ಕಾವ್ಯಗಳು ಇಷ್ಟವಾಗಿದ್ದರೆ, ಹನ್ನೊಂದನೆಯ ಶತಮಾನದವರಿಗೆ ಶಾಸ್ತ್ರ ಕಾವ್ಯಗಳಲ್ಲಿ ಹೆಚ್ಚು ಆದರವುಂಟಾಗಿತ್ತು. ಹೀಗೆ ಕಾಲಕಾಲಕ್ಕೆ ನಡೆಯುವ ಅಭಿರುಚಿ ವ್ಯತ್ಯಾಸಗಳಿಗೆ ಕಾರಣಗಳೇನೆಂಬುದನ್ನು ಅವು ಹೇಗೆ ಸಾಹಿತ್ಯದಲ್ಲಿ ನಾನಾ ರೀತಿಯಾದ ರಚನೆಗಳಿಗೆ ಇಂಬು

ಕೊಟ್ಟಿವೆಂಬುದನ್ನೂ ಸಾಹಿತ್ಯ ಚರಿತ್ರೆ ಕೂಲಂಕಷವಾಗಿ ವಿಮರ್ಶಿಸಿ ಕಂಡು ಹಿಡಿಯಲು ಪ್ರಯತ್ನಿಸಬೇಕು."[೭] ಎಂದು ಡಿ.ಎಲ್. ನರಸಿಂಹಾಚಾರ್ಯರು ಅಭಿಪ್ರಾಯಪಡುತ್ತಾರೆ.

ಒಟ್ಟಿನಲ್ಲಿ ಸಾಹಿತ್ಯ ಚರಿತ್ರೆಯನ್ನು ಗ್ರಹಿಸಿದ ರೀತಿಯಲ್ಲಿ ಅದರ ಸ್ವರೂಪವನ್ನು ಗುರುತಿಸುವ ರೀತಿಯಲ್ಲಿ ಭಿನ್ನತೆಗಳು ಇವೆ. ಈ ಭಿನ್ನ ಗ್ರಹಿಕೆಗಳೇ ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಮೃದ್ಧಗೊಳಿಸಿದ್ದು ಎಂದು ಹೇಳಬಹುದು.

## ೨.೨ ಸಾಹಿತ್ಯ ಚರಿತ್ರೆಯ ವ್ಯಾಖ್ಯಾನ

ಯಾವುದೇ ಒಂದು ಅಧ್ಯಯನ ಶಿಸ್ತಿನ ಸ್ವರೂಪವನ್ನು ಗುರುತಿಸಿಯಾದ ಮೇಲೆ ಅದನ್ನು ಗ್ರಹಿಸುವ ಕ್ರಮಗಳ ಮೇಲಿಂದ ಅದನ್ನು ವ್ಯಾಖ್ಯಾನಿಸಲಾಗುತ್ತದೆ. ಸಾಹಿತ್ಯ ಚರಿತ್ರೆಯೂ ಕೂಡ ಅನೇಕ ರೀತಿಯಿಂದ ವ್ಯಾಖ್ಯಾನಕ್ಕೆ ಒಳಗಾಗಿದೆ. ಈ ವ್ಯಾಖ್ಯಾನಗಳು ಗ್ರಹಿಕೆಯ ನಿಖರತೆಯಿಂದ ಬಂದುದಾಗಿರುತ್ತದೆ. ಇಲ್ಲಿ ಒಬ್ಬೊಬ್ಬ ಸಾಹಿತ್ಯ ಚರಿತ್ರಕಾರರು ಹೇಗೆ ವ್ಯಾಖ್ಯಾನವನ್ನು ನೀಡಿದರು ಎಂಬುದನ್ನು ಹೇಳುವ ಪ್ರಯತ್ನಕ್ಕೆ ಹೋಗದೆ ಒಟ್ಟು ಸಾಹಿತ್ಯ ಚರಿತ್ರೆಯ ರಚನೆಯ ಕ್ರಮವೇ ಸಾಹಿತ್ಯ ಚರಿತ್ರೆಯನ್ನು ವ್ಯಾಖ್ಯಾನಿಸಿಕೊಂಡ ಬಗೆಯನ್ನು ವಿವರಿಸಲಾಗುವುದು. ಹಾಗೂ ಹೇಗೆ ವ್ಯಾಖ್ಯಾನಿಸಬೇಕು ಎಂಬುದರ ಕುರಿತ ಚರ್ಚೆಯನ್ನು ಮಾಡಲಾಗುತ್ತದೆ.

ಹಾ.ಮಾ. ನಾಯಕರು ಸಾಹಿತ್ಯ ಚರಿತ್ರೆಕಾರನ ಕರ್ತವ್ಯವನ್ನು ಹೇಳುತ್ತಾ "ಎಲ್ಲ ಚರಿತ್ರೆಕಾರರೂ ತಮ್ಮ ತಮ್ಮ ವಿಷಯಗಳ ಚರಿತ್ರೆಯನ್ನು ಬರೆಯುವಾಗ ಆ ವಿಷಯಗಳಲ್ಲಿ ಅಭಿವ್ಯಕ್ತಿಗೊಳ್ಳುವ ಒಂದು ಸಮಾಜದ ಜನಾಂಗದ ಚರಿತ್ರೆಯನ್ನು ಹೇಳುತ್ತಾರೆ. ಹಾಗೆಯೇ ಸಾಹಿತ್ಯ ಚರಿತ್ರೆಯಲ್ಲಿಯೂ ಆಯಾ ಸಾಹಿತ್ಯದಲ್ಲಿ ಪ್ರಕಟಗೊಳ್ಳುವ ಸಮಾಜ ಜೀವನದ, ರಾಷ್ಟ್ರ ಜೀವನದ ಚರಿತ್ರೆ ರೂಪುಗೊಳ್ಳುತ್ತದೆ. ಸಾಹಿತ್ಯ ಚರಿತ್ರೆಕಾರನ ಆದ್ಯ ಕರ್ತವ್ಯ ತಾನು ಆಯ್ದುಕೊಂಡ ಕಾಲ ದೇಶದ ಸಾಹಿತ್ಯ ಕೃತಿಗಳನ್ನು ಕಂಡು ಹಿಡಿದು ಅವುಗಳ ಸ್ವರೂಪವನ್ನು ವರ್ಣಿಸುವುದು"[೮] ಎನ್ನುತ್ತಾರೆ. ಸಾಹಿತ್ಯ ಕೃತಿಯ ಚರಿತ್ರೆ ಒಂದು ಸಮಾಜದ ಚರಿತ್ರೆಯೇ ಆಗಿರುತ್ತದೆ. ಸಮಾಜದ ವಿವಿಧ ಚಟುವಟಿಕೆಗಳ ಪರಿಚಯದಿಂದ ಸಾಹಿತ್ಯ ಕೃತಿಯ ಪರಿಚಯ ನಿಕಟಗೊಳ್ಳುತ್ತದೆ, ಅರ್ಥವಾಗುತ್ತದೆ. ಹೀಗೆ ವ್ಯಾಖ್ಯಾನಿಸಿಕೊಳ್ಳುವುದಾದರೆ ಮಿಷನರಿಗಳು ಮಾಡಿದ ಸಾಹಿತ್ಯ ಚರಿತ್ರೆ ಸಮಾಜವನ್ನು ಅರ್ಥ ಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿಯೇ ಹುಟ್ಟಿದ್ದು. ಅಂದರೆ ಸಾಹಿತ್ಯ ಚರಿತ್ರಕಾರ ಸಮಾಜವನ್ನು ನಿಕಟವಾಗಿ ಅರ್ಥೈಸಿಕೊಂಡರೆ ಸಾಹಿತ್ಯ ಚರಿತ್ರೆ ಅರ್ಥವಾಗುತ್ತದೆ ಎನ್ನುವುದಾದರೆ ಮಿಷನರಿಗಳು ಮುಖ್ಯವಾಗಿ ಮಾಡಿದ ಕೆಲಸವೇ ಸಮಾಜವನ್ನು ಅರ್ಥ ಮಾಡಿಕೊಳ್ಳುವ

ಪ್ರಯತ್ನದ್ದು. ಈ ಪ್ರಯತ್ನದ ಪ್ರಕ್ರಿಯೆಯಲ್ಲಿ ಸಾಹಿತ್ಯ ಚರಿತ್ರೆಯು ಹುಟ್ಟಿಕೊಂಡದ್ದನ್ನು ವಿಶೇಷವಾಗಿ ಗಮನಿಸಬೇಕು.

ಸಾಹಿತ್ಯ ಕೃತಿಗಳು ತನ್ನ ಹಿಂದಿನ ಕವಿಗಳ, ಕೃತಿಕಾರರ ಕುರಿತು ಕೆಲವು ಸಂಗತಿಗಳನ್ನು ಪ್ರತಿಮಾತ್ಮಕವಾಗಿ, ಕಾಲ್ಪನಿಕ ದಂತಕಥೆಯ ರೂಪದಲ್ಲಿ ನೀಡಿರುತ್ತವೆ. ಇಂತಹ ಅಂಶಗಳನ್ನು ಸಾಹಿತ್ಯ ಚರಿತ್ರೆಯನ್ನು ರಚನೆ ಮಾಡುವಾಗ ಹೇಗೆ ನೋಡಲಾಗಿದೆ ಎಂಬುದು ಬಹಳ ಮುಖ್ಯ ಸಂಗತಿ. ಇಂತಹ ಸಂಗತಿಗಳನ್ನು ಕೇವಲ ಕಾಲ್ಪನಿಕ ಎಂದು ಪರಿಗಣಿಸಿ, ಸಾಹಿತ್ಯ ಚರಿತ್ರೆಯಂತಹ ಒಂದು ಖಚಿತ ದಾಖಲೆಗಳ ರಚನೆಗೆ ಅಗತ್ಯವಿಲ್ಲ, ಉಪಯೋಗವಿಲ್ಲ ಎಂದು ಬದಿಗೆ ಸರಿಸಲಾಗುತ್ತದೆ. ಯಾಕೆ? ಹಾಗಾದರೆ ಇದನ್ನು ಗ್ರಹಿಸುವ ಮಾದರಿ ಯಾವುದು? ಈ ಮೂಲಗಳನ್ನು ನೋಡುವಾಗ ಖಚಿತ ಸಂಗತಿಗಳೆಂದಾಗಲೀ ಬರಿಯ ಕಲ್ಪನೆಯ ಲೋಕದವು ಎಂದಾಗಲೀ ಗ್ರಹಿಸುವುದರ ಬದಲು ಅವು ತಾವು ಸೃಷ್ಟಿಯಾದ ಸಂದರ್ಭದ ಪ್ರತಿಮಾ ಸೂಚಕಗಳು ಎಂದು ತಿಳಿಯಬೇಕಾಗುತ್ತದೆ. ಇಂಥ ದಾಖಲೆಗಳನ್ನು ನೋಡುವ ಚರಿತ್ರೆಕಾರನ ಊಹೆಯ ನೆಲೆಗಳು ಕೇವಲ ಕಾಲ್ಪನಿಕವಲ್ಲ. ಅವುಗಳು ಭಿನ್ನ ಸಂಗತಿಗಳ ಮೂಲಕ ಪೋಷಣೆಯನ್ನು ಪಡೆದಿರಬೇಕು ಎಂದು ವ್ಯಾಖ್ಯಾನಿಸಿಕೊಳ್ಳಬೇಕಾಗುತ್ತದೆ. "ಸಾಹಿತ್ಯ ಚರಿತ್ರೆಕಾರನಾಗಿ ಆ ಸಾಹಿತ್ಯದ ಹಿನ್ನೆಲೆಯಲ್ಲಿರುವ ಪುರಾಣಗಳನ್ನು ಅದರೊಂದಿಗೆ ಬೆಳೆದು ಬಂದ ಸಂಪ್ರದಾಯಗಳನ್ನು ಅರಿತು ವ್ಯಾಖ್ಯಾನಿಸುವುದು ಅಗತ್ಯವಾಗುತ್ತದೆ"[೯] ಎಂಬ ಹಾ.ಮಾ. ನಾಯಕರ ಮಾತನ್ನೇ ಒಪ್ಪಬೇಕಾಗುತ್ತದೆ.

ಈ ಪುರಾಣ ಪ್ರಪಂಚವನ್ನು ವ್ಯಾಖ್ಯಾನಿಸಿಕೊಳ್ಳುವ ಬಗೆಯಿಂದಾಗಿ ಒಂದು ಜೀವನ ಸಮುದಾಯದ ಬದುಕಿನ ವಿವರಗಳನ್ನು ಪಡೆಯಬಹುದು. ಅಷ್ಟೇ ಅಲ್ಲದೆ ಈ ಮಾದರಿಯಲ್ಲಿ ಚರಿತ್ರೆಯನ್ನು ಕಟ್ಟಿಕೊಳ್ಳುವ ಸಂದರ್ಭಗಳು ಚರಿತ್ರೆಯನ್ನು ಇನ್ನಷ್ಟು ಹಿಂದಕ್ಕೆ ತೆಗೆದುಕೊಂಡು ಹೋಗಿ ನಿಲ್ಲಿಸಿತು. "18–19ನೇ ಶತಮಾನದಲ್ಲಿ ಪಶ್ಚಿಮದಲ್ಲಾದ ವೈಜ್ಞಾನಿಕ ಬೆಳವಣಿಗೆ ಉಂಟು ಮಾಡಿದ ಮನೋಭಾವ ಚರಿತ್ರೆಯ ಅಧ್ಯಯನದಲ್ಲೂ ಖಚಿತ ವಿನ್ಯಾಸ, ನಿಖರತೆ ಮುಖ್ಯ ಅಂಶವಾಗಬೇಕೆಂದು ಒತ್ತಾಯಿಸಿತು. ಖಚಿತವಾದ ವಸ್ತುನಿಷ್ಠತೆಯನ್ನು ಹೊಂದಿರಬೇಕು ಎಂಬ ಆಲೋಚನೆ ಇತಿಹಾಸದ ಕಲ್ಪನೆಯನ್ನು ಹಿಂದು ಹಿಂದಕ್ಕೆ ತೆಗೆದುಕೊಂಡು ಹೋಗುವ ಸ್ವರೂಪದ್ದಾಯಿತು"[೧೦] ಎಂದು ಹೇಳುವ ಬಸವರಾಜ ಕಲ್ಗುಡಿಯವರು ಈ ಅಂಶವನ್ನು ಗುರುತಿಸುತ್ತಾರೆ.

ಸಾಹಿತ್ಯ ಚರಿತ್ರೆಯನ್ನು ನಿರ್ದಿಷ್ಟವಾಗಿ ವ್ಯಾಖ್ಯಾನಿಸುವ ಪ್ರವೃತ್ತಿಯನ್ನು ಬರವಣಿಗೆ ಮಾದರಿಯಲ್ಲೂ ನಾವು ಕಾಣಬಹುದು. ಸಾಹಿತ್ಯ ಚರಿತ್ರೆ ಅದು ಲಭ್ಯವಾದ ಮಾಹಿತಿಗಳನ್ನು

ಒಂದು ನಿರ್ದಿಷ್ಟ ಮಾದರಿಯಲ್ಲಿ ಜೋಡಿಸಿಕೊಡುವ ಕೆಲಸವಷ್ಟೇ ಅಲ್ಲ. ಸಾಹಿತ್ಯ ಚರಿತ್ರೆಯನ್ನು ಮುಖ್ಯವಾಗಿ ಮತೀಯ ನೆಲೆಯಲ್ಲಿ, ಭಾಷಿಕ ನೆಲೆಯಲ್ಲಿ, ಸಾಹಿತ್ಯದ ರೂಪದ ನೆಲೆಯಲ್ಲಿ, ರಾಜವಂಶದ ನೆಲೆಯಲ್ಲಿ, ಪ್ರಮುಖ ಕವಿಗಳ ನೆಲೆಯಲ್ಲಿ ವಿಭಜಿಸಲಾಗಿದೆ ಎಂದರೆ ಇಷ್ಟು ಭಿನ್ನ ಮಾದರಿಯಲ್ಲಿ ಸಾಹಿತ್ಯ ಚರಿತ್ರೆಯನ್ನು ವ್ಯಾಖ್ಯಾನಿಸಲಾಗಿದೆ ಎಂದರ್ಥ. ಒಂದೊಂದು ರೀತಿಯ ವಿಭಜನೆಗೂ ಒಂದೊಂದು ನಿರ್ದಿಷ್ಟ ಕಾರಣಗಳಿವೆ. ಈ ಎಲ್ಲಾ ವ್ಯಾಖ್ಯಾನಗಳನ್ನೂ ಮೀರಿ ಸಾಹಿತ್ಯ ಚರಿತ್ರೆಯ ರಚನೆಗೆ ಕಾವ್ಯದ ಅಂತರಂಗವನ್ನು ತೆರೆದು ಅನಾವರಣಗೊಳಿಸುವುದು ಅವಶ್ಯಕ. "ಒಂದು ಕೃತಿ ತನ್ನ ಕಾಲದ ಧರ್ಮ ಮತ್ತು ರಾಜಾಶ್ರಯವನ್ನು ಮೀರಿ ಬೆಳೆಯುತ್ತದೆ. ಹೀಗೆ ಬೆಳೆದ ಕೃತಿಯೇ ಆ ಯುಗದ ಜೀವನದ ಕನ್ನಡಿ. ಈ ಬೆಳವಣಿಗೆಯನ್ನು ಗುರುತಿಸುವುದು ಕವಿ ಆರಿಸಿಕೊಂಡ ವಸ್ತು ವಿಧಾನಗಳೆರಡರ ಹಿಂದೆಯೂ ಸಮಕಾಲೀನ ಸಂದರ್ಭದ ಒತ್ತಡಗಳು ಇರುತ್ತವೆ ಎಂಬುದನ್ನು ಶೋಧಿಸುವುದು ಸಾಹಿತ್ಯ ಚರಿತ್ರೆಯ ಕೆಲಸವಾಗುತ್ತದೆ. ಸಾಹಿತ್ಯ ಚರಿತ್ರೆ ಕವಿಯೊಬ್ಬ ತನ್ನ ಕಾಲದ ಜೀವನದ ಸಂಘರ್ಷವನ್ನು ಹೇಗೆ ನೋಡಿದ್ದಾನೆ ಎಂಬ ಪರಿಶೀಲನೆಯನ್ನು ಮಾಡಬಯಸುತ್ತದೆ. ಸಾಹಿತ್ಯ ಚರಿತ್ರೆಕಾರ ಸಾಹಿತ್ಯದ ಬೆಳವಣಿಗೆಯ ಹಿಂದೆ ಕೆಲಸ ಮಾಡಿರುವ ಸಮಾಜದ ತುಡಿತಗಳನ್ನೂ ತರತಮಗಳ ಸಂಘರ್ಷವನ್ನೂ ಅರ್ಥ ಮಾಡಿಕೊಂಡಾಗ ಆಯಾ ಕಾಲದ ಕೃತಿಗಳ ಅಂತರಂಗದ ದರ್ಶನ ಸಾಧ್ಯವಾಗುತ್ತದೆ"[11] ಎಂದು ಸಿ. ವೀರಣ್ಣನವರು ಹೇಳುತ್ತಾರೆ. ಸಾಹಿತ್ಯ ಚರಿತ್ರೆಯನ್ನು ರಚಿಸುವಾಗ ಸಾಹಿತ್ಯ ಕೃತಿಯೇ ತನ್ನ ಕಾಲದ ಸಾಮಾಜಿಕ ಧಾರ್ಮಿಕ ಹಾಗೂ ಅಧಿಕಾರದ ವಿರುದ್ಧವಾದ ಒಂದು ಜಾಗೃತ ಪ್ರಜ್ಞೆಯನ್ನು ಹೊಂದಿರುತ್ತದೆ. ಇದನ್ನು ಸಾಹಿತ್ಯ ಕೃತಿಯಲ್ಲಿ ಕಾಣುವುದಕ್ಕೆ ಸಾಧ್ಯವಿದೆ. ಇಂತಹ ಸಂಗತಿಗಳನ್ನು ಹೊರಗೆ ತಂದು ತಾತ್ವಿಕವಾಗಿ ವಿಶ್ಲೇಷಿಸುವ ಬಗೆಯು ಸಾಹಿತ್ಯ ಚರಿತ್ರೆಯನ್ನು ವ್ಯಾಖ್ಯಾನಿಸುತ್ತದೆ. ಸಾಮಾಜಿಕ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ ಸಾಹಿತ್ಯದಲ್ಲಿ ಉಂಟಾಗಿರುವ ಚಾರಿತ್ರಿಕ ಬದಲಾವಣೆ ಮತ್ತು ಬೆಳವಣಿಗೆಯನ್ನು ಕೃತಿಗಳ ಅಂತರಂಗದ ಮೂಲಕ ಗ್ರಹಿಸಿ ಅರ್ಥೈಸಬೇಕಾಗಿದೆ. ಆದರೆ ಮೊದಲ ಘಟ್ಟದಲ್ಲಿ ಬಂದ ಚರಿತ್ರೆಯ ಕೆಲಸಗಳು ಕೃತಿಯ ಬಾಹ್ಯ ಸಂಗತಿಗಳು ಕೃತಿಕಾರನ ಮತ, ಆಶ್ರಯದಾತ, ಕೃತಿಯ ವಸ್ತುವಿನ ಮೂಲಕ ಕಾಲದ ನಿಖರತೆಯ ಹುಡುಕಾಟದಿಂದ ಕಟ್ಟಲಾಗಿದೆ. ಆದರೆ ಅದು ಕೃತಿಯ ಒಳಹೊಕ್ಕು ವಸ್ತು ಅಂತರಂಗವನ್ನು ಬಗೆದು ಶೋಧಿಸಿದ ಚರಿತ್ರೆಯಾಗಿಲ್ಲ. ಭಾಷೆಯ ಅಭಿವ್ಯಕ್ತಿಯಲ್ಲಿ ಕಾಲದಿಂದ ಕಾಲಕ್ಕೆ ಉಂಟಾದ ಬದಲಾವಣೆಗಳನ್ನು ಗುರುತಿಸಿದ್ದೇವೆ. ಸಾಹಿತ್ಯ ರೂಪದಲ್ಲಿ ಬದಲಾವಣೆಗಳು ಉಂಟಾಗಿವೆ. ವಸ್ತು ಆಶ್ರಯದಲ್ಲೂ ಬದಲಾವಣೆಗಳು ಆಗಿವೆ. ಈ ಬದಲಾವಣೆಗಳು ಸಂಭವಿಸಿದ್ದು ಆಕಸ್ಮಿಕವಾಗಿ ಆಗಿರಲಾರದು. ಈ ಬದಲಾವಣೆಯ ಮೂಲದಲ್ಲಿ ಸಾಮಾಜಿಕ ಮತ್ತು ಪ್ರಭುತ್ವದ ಕಾರಣಗಳು ಇರುತ್ತವೆ. ಅಂತಹ ಬದಲಾವಣೆಯ ಹಿಂದೆ ಒಂದು ಸಾಮಾಜಿಕ ಒತ್ತಡ ಇರುತ್ತದೆ. ಚಂಪೂವಿನಿಂದ ವಚನಕ್ಕೆ ಬದಲಾದ ಕಾಲಘಟ್ಟದಲ್ಲಿ

ಪ್ರಭುತ್ವದ ಪಲ್ಲಟಗಳನ್ನು ನೋಡುತ್ತೇವೆ. ರೂಪದ ಮತ್ತು ಭಾಷೆಯ ಬದಲಾವಣೆಗೆ ಇದ್ದ ಸಾಮಾಜಿಕ ಒತ್ತಡ ಕಾವ್ಯವು ಜನಸಾಮಾನ್ಯರಿಂದ ದೂರವಾಗಿ ಆಸ್ಥಾನ ಪಂಡಿತರಿಗೆ ಮಾತ್ರ ಸೀಮಿತವಾಗಿದ್ದ ಒಂದು ಸಂದರ್ಭವನ್ನು ಹೇಳುತ್ತದೆ. ಇಂತಹ ಸಂಗತಿಗಳನ್ನು ಗುರುತಿಸುವುದಕ್ಕೆ ಸಾಹಿತ್ಯ ಚರಿತ್ರಕಾರನಿಗೆ ಸಾಧ್ಯವಾಗಬೇಕು.

ಒಂದು ನಿರ್ದಿಷ್ಟ ಕಾಲಘಟ್ಟದಿಂದ ಆರಂಭಿಸಿ ಮುಂದಿನ ಒಂದು ನಿರ್ದಿಷ್ಟ ಕಾಲಘಟ್ಟದವರೆಗೆ ಎಂದು ಹೇಳಲಾಗಿ ಕಟ್ಟಲಾಗುವ ಸಾಹಿತ್ಯ ಚರಿತ್ರೆ ಈ ಒಂದು ನಿರ್ದಿಷ್ಟ ಆರಂಭ ಮತ್ತು ಅಂತ್ಯದ ನಡುವೆ ಹಾಗೂ ಈ ಅಂತ್ಯ ಮತ್ತು ಇನ್ನೊಂದು ಕಾಲಘಟ್ಟದ ಆರಂಭದ ನಡುವೆ ಬಹಳ ಸ್ಪಷ್ಟವಾಗಿ ಗುರುತಿಸಬಲ್ಲ ಯಾವ ಕಾರಣಗಳನ್ನೂ ನೀಡಿಲ್ಲ. ಈ ಎರಡು ಕಾಲಘಟ್ಟಗಳ ನಡುವಿನ ಬದಲಾವಣೆ ಮತ್ತು ಬೆಳವಣಿಗೆಗಳನ್ನು ಕುರಿತ ಹಾಗೆ ಸಮಗ್ರವಾದ ಒಂದು ಚಾರಿತ್ರಿಕ ನೋಟವನ್ನು ನೀಡುವುದಿಲ್ಲ. ಆರ್. ನರಸಿಂಹಾಚಾರ್ಯ ತನ್ನ ಕವಿಚರಿತೆಯ ಮೊದಲ ಸಂಪುಟವನ್ನು ಹದಿನಾಲ್ಕನೇ ಶತಮಾನದ ಕೊನೆಯವರೆಗೆ ಎಂದು ನೀಡಿ, ಮುಂದಿನ ಸಂಪುಟವನ್ನು ಹದಿನೇಳನೆಯ ಶತಮಾನದ ಕೊನೆಯವರೆಗೆ ಹಾಗೂ 3ನೇ ಸಂಪುಟ 18 ಮತ್ತು 19ನೇ ಶತಮಾನಗಳು ಎಂದು ಕಾಲವನ್ನು ವಿಭಜಿಸಿಕೊಂಡಿದ್ದಾರಷ್ಟೆ. ಇದಕ್ಕೆ ಕಾಲಘಟ್ಟದ ಹಿನ್ನೆಲೆಯಿಂದ ನಿರ್ದಿಷ್ಟ ವಿವರಣೆಗಳು ಇಲ್ಲ ಮತ್ತು ಈ ಎರಡು ಕಾಲಘಟ್ಟಗಳನ್ನು ವಿಭಜಿಸುವ ಅಥವಾ ಆರಂಭಿಸುವ ಒಂದು ಸಾಮಾನ್ಯ ಸೂತ್ರವನ್ನು ಹೇಳಿಲ್ಲ. ಶತಮಾನಗಳಷ್ಟು ದೀರ್ಘವಾದ ಸಾಹಿತ್ಯ ರಚನೆಯಲ್ಲಿ ಕಾಲಗತಿಯ ಗ್ರಹಿಕೆಯನ್ನು ಸರಳ ರೇಖಾತ್ಮಕವಾಗಿ ಚಿತ್ರಿಸಲಾಗಿದೆ. “ಒಂದು ಭಾಷೆಯ ಸಾಹಿತ್ಯ ಚರಿತ್ರೆಯು ಆ ಭಾಷಾ ಸಮುದಾಯದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಚರಿತ್ರೆಗೆ ಸಮಾನಾಂತರವಾಗಿ ಬೆಳೆಯುವ ಸಂಗತಿ. ಸಾಹಿತ್ಯ ಚರಿತ್ರಕಾರನು ಯಾವಾಗಲೂ ಕವಿ, ಕೃತಿಗಳ ಕಾಲ, ಜಾತಿ, ಕೌಟುಂಬಿಕ ಸಂಗತಿಗಳು ಮುಂತಾದ ಬಾಹ್ಯ ವಿವರಗಳಿಂದ ತೃಪ್ತನಾಗುವುದಿಲ್ಲ. ಸಾಹಿತಿಯು ತನ್ನ ‘ಸಂದರ್ಭ’ದಿಂದ ಪ್ರಭಾವಿತನಾದ ಮತ್ತು ಅದಕ್ಕೆ ಪ್ರತಿಕ್ರಿಯಿಸಿದ ರೀತಿಯ ಕಡೆಗೆ ಅವನ ಗಮನ ಹರಿಯುತ್ತದೆ”[೧೨] ಎಂದು ಎಚ್.ಎಸ್.ರಾಘವೇಂದ್ರರಾವ್ ಹೇಳುತ್ತಾರೆ.

ಸಾಹಿತ್ಯ ಚರಿತ್ರೆ ಕೇವಲ ಆಯಾ ಅವಧಿಯ ಕವಿ–ಕೃತಿಗಳ ವಿವರವಾದ ಪರಿಚಯ ಮಾತ್ರವಲ್ಲದೆ ಜನಜೀವನ ಮತ್ತು ಸಾಹಿತ್ಯ, ರಾಜಕೀಯ ಚರಿತ್ರೆ, ಕನ್ನಡ ನಾಡಿನ ಧಾರ್ಮಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಜನಜೀವನದ ಕುರಿತ ಚರ್ಚೆಯಾಗುತ್ತದೆ. ಅಂದರೆ ಸಾಹಿತ್ಯ ಚರಿತ್ರೆಯನ್ನು ಕವಿ–ಕೃತಿಗಳ ಆಧಾರದಲ್ಲಿ ಕಟ್ಟುತ್ತಲೇ ಅದು ಈ ನಾಡಿನ ಒಂದು ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟುವ ಆಸಕ್ತಿಯನ್ನು ಹೊಂದಿರಬೇಕು. ಲಭ್ಯ ಸಾಹಿತ್ಯ ಕೃತಿಗಳ ವಿವರದ

ಮೂಲಕವೇ ಆ ಕಾಲದ ನಾಡಿನ ಉಳಿದೆಲ್ಲಾ ವಿವರಗಳನ್ನು ಸಾಹಿತ್ಯ ಚರಿತ್ರೆ ಸಂಯೋಜಿಸಿಕೊಳ್ಳುತ್ತಾ ಅವುಗಳನ್ನು ನಾಡಿನ ಚರಿತ್ರೆಯಾಗಿ ನಿರೂಪಿಸಬೇಕು. ನಿರ್ದಿಷ್ಟ ಘಟನೆಗಳೇ ಚರಿತ್ರೆಯೇ? ಮನುಷ್ಯ ಬದುಕಿನ ಅವಸ್ಥೆಗಳನ್ನೂ ಅವುಗಳ ನಡುವಣ ಪರಸ್ಪರ ಸಂಬಂಧಗಳನ್ನು ಗುರುತಿಸುವ ಕಾಳಜಿ ಇರಬೇಕಾಗುತ್ತದೆ. ಚರಿತ್ರೆಯಲ್ಲಿಯ ಗತಿಯನ್ನು ಗುರುತಿಸಲಾಗದ ಬರಹಗಳು ಯಾವುದೇ ಘಟನೆಗಳ ವಿವರಗಳನ್ನು ಮೂಲ ಘಟನೆಗೆ ಸಂವಾದಿಯೆಂದು ಅಥವಾ ಪ್ರತಿರೂಪವೆಂದೇ ಗುರುತಿಸುವುದರಲ್ಲಿ ತೃಪ್ತಿ ಹೊಂದಬೇಕಾಗುತ್ತದೆ. ಕಾಲಕಾಲಕ್ಕೆ ಉಂಟಾದ ಬೆಳವಣಿಗೆ ಬದಲಾವಣೆಗಳು ಚಾರಿತ್ರಿಕ ಅನಿವಾರ್ಯತೆಯನ್ನು ಸೂಚಿಸುತ್ತವೆ. ಸಾಹಿತ್ಯ ಚರಿತ್ರೆಕಾರ ಸಾಹಿತ್ಯದ ಸ್ವರೂಪದಲ್ಲಾದ ಬದಲಾವಣೆಯ ಅಂಶಗಳ ನಿರೂಪಣೆಗೆ ಗಮನವನ್ನು ಕೊಡಬೇಕಾಗುತ್ತದೆ. ಈ ಬದಲಾವಣೆಯನ್ನು ಇ.ಪಿ. ರೈಸ್, ಎಫ್. ಕಿಟ್ಟೆಲ್, ಆರ್. ನರಸಿಂಹಾಚಾರ್ಯ ಬಹಳ ಮೇಲ್‌ಸ್ತರದಲ್ಲಿ ಗ್ರಹಿಸಿದ್ದಾರೆ. ಡಿ.ಎಲ್. ನರಸಿಂಹಾಚಾರ್ "ಸಾಹಿತ್ಯ ಚರಿತ್ರೆಯ ರಚನೆಯೂ ಆನಂದದ ನೆಲೆಯಲ್ಲಿ ಕಾಣಿಸುವ ಒಂದು ಮಾರ್ಗ"[೧೩] ಸಾಹಿತ್ಯ ಚರಿತ್ರೆಯನ್ನು ವ್ಯಾಖ್ಯಾನಿಸುತ್ತಾರೆ.

ಒಟ್ಟಿನಲ್ಲಿ ವಸಾಹತುಶಾಹಿ ಕಾಲಘಟ್ಟದಿಂದ ಹಿಡಿದು ಇತ್ತೀಚಿನವರೆಗೂ ಸಾಹಿತ್ಯ ಚರಿತ್ರೆ ಹೊಸ ಹೊಸ ವ್ಯಾಖ್ಯಾನಗಳನ್ನು ಪಡೆಯುತ್ತಲೇ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಿದೆ. ಕವಿ, ಕಾಲ, ಕೃತಿಗಳ ವಿವರವನ್ನಷ್ಟೇ ನೀಡುವಲ್ಲಿಂದ ಪ್ರಾರಂಭವಾದ ಸಾಹಿತ್ಯ ಚರಿತ್ರೆ ಬೆಳೆದು ಒಂದು ಕೃತಿ, ಒಬ್ಬ ಕವಿಯ ಮೂಲಕ ನಾಡಿನ ಸಮಗ್ರ ಚರಿತ್ರೆಯನ್ನು ಕಟ್ಟುವ ಸಂದರ್ಭದಲ್ಲಿ ಬಹಳ ಮುಖ್ಯ ಎನ್ನುವಲ್ಲಿಗೆ ಬಂದು ಬಹು ವಿಶಾಲವಾದ ಮತ್ತು ಸಮಗ್ರತೆಯನ್ನುಳ್ಳ ವ್ಯಾಖ್ಯಾನಗಳನ್ನು ಪಡೆಯುತ್ತಿದೆ.

# ಸಂದರ್ಭ ಸೂಚಿ


೧. ಡಿ.ಎಲ್.ನರಸಿಂಹಾಚಾರ್, 'ಪೀಠಿಕೆಗಳು, ಲೇಖನಗಳು,' ಡಿ.ವಿ.ಕೆ ಮೂರ್ತಿ ಕೃಷ್ಣಮೂರ್ತಿಪುರಂ, ಮೈಸೂರು 1971, ಪುಟ 994.

೨. ಅದೇ .. .. ಪುಟ 995

೩. ಡಾ.ಹಾ.ಮಾ. ನಾಯಕ (ಸಂ) ಕನ್ನಡ ಸಾಹಿತ್ಯ ಚರಿತ್ರೆ ಸಂ.೧ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1974, ಪುಟ 32

೪. ಡಾ.ಜಿ.ಎಸ್. ಶಿವರುದ್ರಪ್ಪ (ಸಂ) ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂ.೧ ಬೆಂಗಳೂರು, ವಿವಿ. ಪುಟ 1

೫. ಡಾ. ಹಾ.ಮಾ. ನಾಯಕ್ (ಸಂ) ಕನ್ನಡ ಸಾಹಿತ್ಯ ಚರಿತ್ರೆ ಸಂ.೧ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1974, ಪುಟ 604

೬. ಅದೇ .. .. ಪುಟ 33

೭. ಡಿ.ಎಲ್.ಎನ್. ಪೀಠಿಕೆಗಳು, ಲೇಖನಗಳು, ಡಿ.ವಿ.ಕೆ ಮೂರ್ತಿ ಕೃಷ್ಣಮೂರ್ತಿಪುರಂ, ಮೈಸೂರು 1971, ಪುಟ 999

೮. ಡಾ. ಹಾ.ಮಾ. ನಾಯಕ್ (ಸಂ) ಕನ್ನಡ ಸಾಹಿತ್ಯ ಚರಿತ್ರೆ ಸಂ.೧ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1974, ಪುಟ 267

೯. ಅದೇ .. .. ಪುಟ 28

೧೦. ಬಸವರಾಜ ಕಲ್ಗುಡಿ, ಸಂಶೋಧನೆ–2, ದಶವಾರ್ಷಿಕ ಸಾಹಿತ್ಯ ಸಮೀಕ್ಷೆ, 1982, ಪುಟ 103

೧೧. ಡಾ.ಸಿ.ವೀರಣ್ಣ, ಕನ್ನಡ ಸಾಹಿತ್ಯ ಚರಿತ್ರೆ, ಚಾರಿತ್ರಿಕ ಬೆಳವಣಿಗೆ– ೧ ನವ ಕರ್ನಾಟಕ ಪ್ರಕಾಶನ 1986 ಪುಟ XV

೧೨. ಎಚ್.ಎಸ್. ರಾಘವೇಂದ್ರರಾವ್, ಸಾಹಿತ್ಯದ ಅಧ್ಯಯನ ಮತ್ತು ಇತರ ಶೈಕ್ಷಣಿಕ ಶಿಸ್ತುಗಳು, ದಶವಾರ್ಷಿಕ ಸಾಹಿತ್ಯ ಸಮೀಕ್ಷೆ, 1982, ಪುಟ 165

೧೩. ಡಿ.ಎಲ್.ನರಸಿಂಹಾಚಾರ್, 'ಪೀಠಿಕೆಗಳು, ಲೇಖನಗಳು,' ಡಿ.ವಿ.ಕೆ ಮೂರ್ತಿ ಕೃಷ್ಣಮೂರ್ತಿಪುರಂ, ಮೈಸೂರು 1971, ಪುಟ 995.

# ಅಧ್ಯಾಯ ಮೂರು

## ೩.೦ ಕನ್ನಡ ಸಾಹಿತ್ಯ ಚರಿತ್ರೆ:ಪ್ರೇರಣೆ ಮತ್ತು ಹಿನ್ನೆಲೆ

೩.೧ ಪ್ರವೇಶ

೩.೨ ಸಾಹಿತ್ಯ ಚರಿತ್ರೆಯ ಉಗಮದ ಹಿನ್ನೆಲೆ

೩.೩ ಸಾಹಿತ್ಯ ಚರಿತ್ರೆಯ ಬೆಳವಣಿಗೆಯ ಘಟ್ಟಗಳು

# ೩. ಕನ್ನಡ ಸಾಹಿತ್ಯ ಚರಿತ್ರೆ : ಪ್ರೇರಣೆ ಮತ್ತು ಹಿನ್ನೆಲೆ

## ೩.೧ ಪ್ರವೇಶ

ಸಾಹಿತ್ಯ ಕೃತಿಯೊಂದು ಒಂದು ನಿರ್ದಿಷ್ಟ ಕಾಲದ ಒತ್ತಡದಲ್ಲಿ ಸೃಷ್ಟಿಯಾದಂತೆ ಸಾಹಿತ್ಯ ಚರಿತ್ರೆಯು ಒಂದು ನಿರ್ದಿಷ್ಟ ಕಾಲದ ಅವಶ್ಯಕತೆಯನ್ನು ಪೂರೈಸಲು ಆ ಕಾಲದಲ್ಲಿ ಉಪಲಬ್ಧವಿರುವ ಸಾಮಗ್ರಿಗಳಿಂದ ಮೈತಳೆಯುತ್ತದೆ. ಕನ್ನಡದಲ್ಲಿ ಸಾವಿರ ವರ್ಷಕ್ಕೂ ಹೆಚ್ಚಿನ ಸಾಹಿತ್ಯ ಪರಂಪರೆಯಿದ್ದರೂ ಆ ಸಾಹಿತ್ಯ ಪಠ್ಯಗಳನ್ನೂ ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಸಂಯೋಜಿಸಿ ಸಾಹಿತ್ಯದ ಚರಿತ್ರೆಯೆಂದು ಕರೆಯಬಹುದಾದ ಯಾವ ಪ್ರಯತ್ನಗಳೂ ಈ ಹಿಂದೆ ನಡೆದಿರಲಿಲ್ಲ. ಈ ಪ್ರಯತ್ನವನ್ನು ಮೊದಲು ಮಾಡಿದವರು ಜರ್ಮನಿಯಿಂದ ಬಂದ ಮಿಷನರಿಗಳು. ಸಾಹಿತ್ಯ ಚರಿತ್ರೆಗೆ ಅಡಿಗಲ್ಲು ಹಾಕಿದವರು ವೈಗ್ಲೆ ಎಂಬ ಜರ್ಮನಿಯ ವಿದ್ವಾಂಸ. ಕ್ರಿ.ಶ 1848ರಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಜರ್ಮನ್ ಭಾಷೆಯಲ್ಲಿ ಒಂದು ಲೇಖನವನ್ನು ಬರೆದರು. ಸಾಹಿತ್ಯ ಚರಿತ್ರೆಯನ್ನು ರಚಿಸುವುದು ಅವರ ಉದ್ದೇಶವಲ್ಲದಿದ್ದರೂ, ಆ ದಿಕ್ಕಿನಲ್ಲಿ ಅವರದೇ ಪ್ರಥಮ ಪ್ರಯತ್ನ.

ಸಾಹಿತ್ಯ ಚರಿತ್ರೆಯ ಉಗಮವನ್ನು ಮತ್ತು ಉಗಮದ ಹಿಂದಿನ ಚಾರಿತ್ರಿಕ ಕಾರಣಗಳನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗುವುದು. ಮುಂದೆ ಈ ಸಾಹಿತ್ಯ ಚರಿತ್ರೆ ಬೇರೆ ಬೇರೆಯವರಿಂದ ಬೆಳೆಯುತ್ತಾ ಬಂದಿತು. ಈ ಬೆಳವಣಿಗೆಯ ಘಟ್ಟವನ್ನು ಇಲ್ಲಿ ಗುರುತಿಸಲಾಗುತ್ತದೆ. ಮಿಷನರಿಗಳಾಗಿ ಹೊರಗಿನ ದೇಶದಿಂದ ಬಂದಂತಹವರು ಮೊದಲು ಈ ದೇಶದ ಉದ್ದಗಲಕ್ಕೆ ಸಂಚರಿಸಿ ತಾವು ನೆಲೆ ನಿಂತ ಪ್ರದೇಶದ ಭಾಷೆಯನ್ನು ಕಲಿತರು. ಜನರ ಜೀವನ ವಿಧಾನಗಳನ್ನು ನೋಡಿ ಅರಿತುಕೊಂಡರು. ಭಾಷೆಯನ್ನು ಬಹು ಸಮಗ್ರವಾಗಿ ಕಲಿತ ನಂತರ ಅದರ ವ್ಯಾಕರಣ, ಛಂದಸ್ಸು, ಹಳೆಯ ಕೃತಿಗಳನ್ನು ಪರಿಶೀಲಿಸಿದರು. ಅಧ್ಯಯನ ಕೈಗೊಂಡರು. ಹೀಗೆ ಅಧ್ಯಯನ ಕೈಗೊಂಡಾಗ ಈ ಭಾಷೆಯಲ್ಲಿ ಆ ಕಾಲದಲ್ಲಿ ಸಾಹಿತ್ಯ ಸಂಪತ್ತು ಅಪಾರವಾಗಿದ್ದರೂ ಅವು ಬಿಡಿಬಿಡಿಯಾಗಿ ಅಲ್ಲಲ್ಲಿ ಚದುರಿಹೋಗಿದ್ದು, ಬಹಳ ಅವ್ಯವಸ್ಥಿತ ರೂಪದಲ್ಲಿ ಇರುವುದು ಅವರ ಗಮನಕ್ಕೆ ಬಂದಿತು. ಮಾತ್ರವಲ್ಲದೆ ಅವುಗಳಿಗೆ ಯಾವ ರಕ್ಷಣೆಯೂ ಇರಲಿಲ್ಲ. ಇಂತಹ ಸಾಹಿತ್ಯವನ್ನು ನೋಡಿದ ಮಿಷನರಿಗಳಿಗೆ ಇವುಗಳನ್ನು ಒಂದು ವ್ಯವಸ್ಥಿತ ರೂಪದಲ್ಲಿ ಜೋಡಿಸುವ ಇಚ್ಚೆಯುಂಟಾಗಿ ಮುಂದೆ ಅದು ಸಾಹಿತ್ಯ ಚರಿತ್ರೆಯ ರೂಪವನ್ನು ಪಡೆಯಿತು. ಸಾಹಿತ್ಯ ಚರಿತ್ರೆ ಎನ್ನುವ ಜ್ಞಾನ ರೂಪದ ಉಗಮದ ಹಿಂದಿರುವ ತಾತ್ವಿಕತೆಯನ್ನು, ಪ್ರೇರಣೆಯನ್ನು ಗಮನಿಸಿದರೆ ಮೇಲ್ನೋಟಕ್ಕೆ ಇದು

ಮಿಷನರಿ ಕಾರ್ಯದ ಅವಶ್ಯಕತೆಯಾಗಿಯೇ ಬಂದಿರುವಂತೆ ಕಾಣುತ್ತದೆ. ಅದರ ಕುರಿತು ಮುಂದೆ ಇಲ್ಲಿ ವಿಸ್ತಾರವಾದ ಚರ್ಚೆಯನ್ನು ಮಾಡಲಾಗಿದೆ.

### ೩.೨ ಸಾಹಿತ್ಯ ಚರಿತ್ರೆಯ ಉಗಮದ ಹಿನ್ನೆಲೆ.

ಯಾವುದೇ ಜ್ಞಾನರೂಪವೊಂದು ಅಸ್ತಿತ್ವವನ್ನು ಪಡೆಯಬೇಕಾದರೆ ಅದಕ್ಕೆ ತತ್ಕಾಲಿನ ಒತ್ತಡಗಳು ಇರುತ್ತವೆ. ಅವು ಸಾಮಾಜಿಕ ಒತ್ತಡಗಳಿರಬಹುದು, ರಾಜಕೀಯ ಪ್ರಭುತ್ವದ ಒತ್ತಡಗಳಿರಬಹುದು, ಧಾರ್ಮಿಕ ಒತ್ತಡಗಳಿರಬಹುದು. ಹೀಗಿಲ್ಲದೆ ಅದು ಒಂದು ರೂಪವನ್ನು ಪಡೆದು ಅಸ್ತಿತ್ವಕ್ಕೆ ಬರಲಾರದು. ವಸಾಹತಿನ ಕಾಲವನ್ನು ಧಾರ್ಮಿಕ ವಸಾಹತು ಮತ್ತು ರಾಜಕೀಯ ವಸಾಹತಿನ ಕಾಲ ಎಂದು ವಿಂಗಡಿಸಿಕೊಳ್ಳುವುದಾದರೆ, ಸಾಹಿತ್ಯ ಚರಿತ್ರೆ ಧಾರ್ಮಿಕ ವಸಾಹತಿನ ಕಾಲದ ಒತ್ತಡವಾಗಿ ರೂಪುಗೊಂಡು, ರಾಜಕೀಯ ವಸಾಹತಿನ ಕಾಲದಲ್ಲಿ ಬೆಳೆಯಿತು ಎನ್ನಬಹುದು. ಧಾರ್ಮಿಕ ಪ್ರಚಾರದ ಅವಶ್ಯಕತೆಯಾಗಿ ರೂಪುಗೊಂಡು ಆಡಳಿತಾತ್ಮಕ ಅವಕಾಶದಲ್ಲಿ ವಿಸ್ತಾರವನ್ನು ಪಡೆಯಿತು. ಚಾರಿತ್ರಿಕವಾಗಿ ಈ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಕ್ರಿಯೆ ಬೆಳೆದು ಬಂದ ಬಗೆ ಇದು.

ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಸಂದರ್ಭದಲ್ಲಿ ಇಲ್ಲಿನ ಜ್ಞಾನದ ಜೊತೆ ಅವರು ಮಾಡಿದ ಮುಖಾಮುಖಿಯಲ್ಲಿ ಚರಿತ್ರೆ ಕಟ್ಟುವ ಸ್ವರೂಪವನ್ನು ಕಲಿಸಿಕೊಡುವ ಮಾದರಿ ಇದೆ. ಇಲ್ಲಿನ ಸಾಹಿತ್ಯಕ್ಕೆ ಒಂದು ಚರಿತ್ರೆ ಇಲ್ಲ. ಅದನ್ನು ತಾವು ಕಟ್ಟಿಕೊಡುವ ಹಿನ್ನೆಲೆಯಿಂದ ಅವರ ಮಾತುಗಳು ಇವೆ. ಕಿಟ್ಟೆಲ್ ತನ್ನ ಮೊದಲ ಪ್ರಬಂಧ 'Old Canarese Literature' ನ ಮೊದಲ ಸಾಲನ್ನು ಹೀಗೆ ಪ್ರಾರಂಭಿಸುತ್ತಾರೆ "In attempting to write s survey of a number of old canarese works, a feeling of sadness pervades me, as I think of the great talents that have to a large extent, been misused in the production of those works"[೧].

ಸಾಹಿತ್ಯ ಚರಿತ್ರೆಯನ್ನು ಈ ಕಾಲಘಟ್ಟದಲ್ಲಿ ಕಟ್ಟಬೇಕಾದಾಗ ಅದಕ್ಕೆ ಒಂದು ತಾತ್ವಿಕ ಸ್ವರೂಪವನ್ನು ಗುರುತಿಸಿಕೊಂಡಿಲ್ಲ. ಬದಲಾಗಿ ಅದು ಲಭ್ಯವಾದ ಕೃತಿಗಳನ್ನು ಅವುಗಳ ಮೇಲ್ನೋಟದ, ಕೆಲವೊಮ್ಮೆ ಆಳವಾದ ತಿಳುವಳಿಕೆಯಿಂದ ಒಂದು ಅನುಕ್ರಮಣಿಕೆಯಲ್ಲಿ ಕಟ್ಟುವ ಕೆಲಸವನ್ನು ಮಾಡಿದರು. "ಜರ್ಮನ್‌ನಲ್ಲಿ 'Philology' ಎನ್ನುವ ಒಂದು ಪರಿಕಲ್ಪನೆಯಿದೆ.

ಬೊಯೆಕ್ ಎಂಬ ವಿದ್ವಾಂಸನ ಪ್ರಕಾರ 'Philology' ಎಂದರೆ 'ಜ್ಞಾತದ ಜ್ಞಾನ'. ಆದ ಕಾರಣ ಭಾಷೆ, ಸಾಹಿತ್ಯಗಳ ಕಲೆಗಳ ಮತ್ತು ರಾಜ್ಯಶಾಸ್ತ್ರದ ಧರ್ಮ ಮತ್ತು ಸಮಾಜ ಪದ್ಧತಿಗಳ ಅಧ್ಯಯನವೆಂದೂ ಲಕ್ಷಣೀಕರಿಸಿದ. ಬೊಯೆಕ್‌ನ ಪಾಲಿಗೆ ಸಾಹಿತ್ಯಾಭ್ಯಾಸವು ನಾಗರಿಕತೆಯ ಒಂದು ಸಮಗ್ರ ಶಾಸ್ತ್ರ"[3] ಎಂದು ಹೇಳಲಾಗಿದೆ. ಈ ಮಾತನ್ನು ಸಾಹಿತ್ಯ ಚರಿತ್ರೆಯ ರಚನೆಯ ಹಿನ್ನೆಲೆಯಲ್ಲಿ ವಿಸ್ತರಿಸುವುದಾದರೆ, ಜರ್ಮನ್‌ನಲ್ಲಿ ಸಾಹಿತ್ಯಾಭ್ಯಾಸ ನಾಗರಿಕತೆಯ ಸಮಗ್ರ ಶಾಸ್ತ್ರವಾಗಿದ್ದು, ಜರ್ಮನ್ ಮಿಷನರಿಗಳು ಭಾರತಕ್ಕೆ ಬಂದಾಗ ಇಲ್ಲಿ ಮೊದಲು ಮಾಡಿದ ಕೆಲಸ ಇಲ್ಲಿನ ಭಾಷೆಯನ್ನು ಕಲಿತು ಈ ಭಾಷೆಯಲ್ಲಿ ರಚಿತವಾದ ಸಮಗ್ರ ಸಾಹಿತ್ಯದ ಅಭ್ಯಾಸ. ಅನ್ಯ ನೆಲವೊಂದರಿಂದ ಬಂದು ಧಾರ್ಮಿಕ ವಸಾಹತುವೊಂದನ್ನು ಸ್ಥಾಪಿಸಬೇಕಾದರೆ ಅಲ್ಲಿನ ಪೂರ್ವದ ನಾಗರಿಕತೆಯ ಕುರಿತು ಜ್ಞಾನ ಗಳಿಸಿಕೊಳ್ಳಬೇಕು. ಆ ನಾಗರೀಕತೆಯ ಎಲ್ಲಾ ಏಳು–ಬೀಳುಗಳನ್ನು ಕಣ್ಮುಂದೆ ತಂದುಕೊಳ್ಳಬೇಕು. ನಾಗರೀಕತೆಯ ಈ ಸಮಗ್ರ ವಿಕಾಸದ ಕಥನವನ್ನು ಸಾಹಿತ್ಯದ ಮೂಲಕ ಅಭ್ಯಾಸ ಮಾಡಬಹುದು. ಹಾಗಾಗಿ ಸಾಹಿತ್ಯದ ಕುರಿತ ಸಮಗ್ರ ಗ್ರಹಿಕೆಯು ನಾಗರಿಕತೆಯ ಸಮಗ್ರ ಗ್ರಹಿಕೆಯೇ ಆಗುತ್ತದೆ ಎಂಬ ಕಾರಣದಿಂದ ಇಲ್ಲಿನ ಸಾಹಿತ್ಯದ ಅಭ್ಯಾಸವನ್ನು ಮಾಡಿದರು. ಅದನ್ನು ಒಂದು ಕಾಲಾನುಕ್ರಮದ ಮಾದರಿಯಲ್ಲಿ ಕಟ್ಟುವ ಮೂಲಕ ನಾಗರಿಕತೆಯ ಚಲನೆಯ ಕಥನವೊಂದನ್ನು ಮೂರ್ತರೂಪಕ್ಕೆ ತರುವ ಪ್ರಯತ್ನವೇ ಇದಾಯಿತು. ಈ ನೆಲೆಯಿಂದ ಇನ್ನೂ ಅನೇಕ ವಿದ್ವಾಂಸರು ಇದೇ ಅಭಿಪ್ರಾಯವನ್ನು ಹೊಂದಿದ್ದಾರೆ. "ಕನ್ನಡ ಸಾಹಿತ್ಯ ಚರಿತ್ರೆಯ ರಚನೆಯ ಪ್ರಯತ್ನಗಳು ವ್ಯವಸ್ಥಿತವಾಗಿ ಪ್ರಾರಂಭವಾದದ್ದು ಕ್ರೈಸ್ತ ಪಾದ್ರಿಗಳು ಮತ್ತು ಅಧಿಕಾರಿಗಳಿಂದಲೇ. ತಮ್ಮ ಹಿಡಿತವನ್ನು ಬಲಪಡಿಸುವ ಉದ್ದೇಶದಿಂದ, ಜನಜೀವನದ ಸಾಂಸ್ಕೃತಿಕ ವಲಯದಲ್ಲಿ ಆಳವಾಗಿ ಬೇರು ಬಿಡುವ ಪ್ರಯತ್ನವನ್ನು ಅವರು ಮಾಡಿದುದರ ಫಲವಾಗಿ ದೇಶೀಯ ಭಾಷೆಗಳ ಪ್ರಾಚೀನ ಸಾಹಿತ್ಯ ಸಂಪತ್ತು ಬೆಳಕಿಗೆ ಬರತೊಡಗಿತು. ಅವುಗಳಿಗೊಂದು ಚರಿತ್ರೆಯ ನಿರ್ಮಾಣದ ಕೆಲಸವೂ ಆರಂಭವಾಯಿತು"[4] ಎಂದು ಡಾ. ಕೆ.ಎಂ ಮ್ಯಾಥ್ಯೂ ಅಭಿಪ್ರಾಯ ಪಡುತ್ತಾರೆ.

ಐ.ಮಾ. ಮುತ್ತಣ್ಣನವರ "19ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ" ಎಂಬ ಕೃತಿಯ ಸಮೀಕ್ಷೆಯನ್ನು ನಡೆಸಿದ ಡಾ. ಶ್ರೀನಿವಾಸ ಹಾವನೂರ 'ಮತ ಪ್ರಸಾರವೇ ಈ ಎಲ್ಲಾ ಕ್ರೈಸ್ತ ಸಂಸ್ಥೆಗಳ ಗುರಿಯಾಗಿದ್ದಿತ್ತಾದರೂ ಅವರು ನಮ್ಮ ಒರಟು ಸ್ವಭಾವದ ಜನಕ್ಕೆ ನಯ, ವಿನಯ, ದಯೆ, ಧರ್ಮ ಇತ್ಯಾದಿಗಳನ್ನು ಕಲಿಸಿದರು' ಎಂಬ ಮಾತಿಗೆ ಪ್ರತಿಕ್ರಿಯೆಯಾಗಿ ಹೀಗೆ ಹೇಳುತ್ತಾರೆ. "ಅವರು ಯಾರಿಗಾಗಿ ಯಾತಕ್ಕಾಗಿ ಇಷ್ಟೆಲ್ಲಾ ಮಾಡಿದ್ದು ಎಂಬ ಪ್ರಶ್ನೆಯನ್ನು ಮತ್ತೊಮ್ಮೆ ಕೇಳಬೇಕಾಗುತ್ತದೆ. ಶಬ್ದಕೋಶ ರಚನೆಯಂಥ ಸಾಹಿತ್ಯಿಕ ಕಾರ್ಯದಲ್ಲೂ ಅವರಲ್ಲಿ ಮತ ಪ್ರಸಾರವೇ

ಮೂಲ ಪ್ರೇರಣೆಯಾಗಿತ್ತೆಂಬುದಕ್ಕೆ ಮರಾಠಿ–ಇಂಗ್ಲೀಷ್ ಕೋಶವನ್ನು ರಚಿಸಿದ ಮೆಲ್ಸ್‌ವರ್ಥ್‌ನ ಮಾತು ನಿದರ್ಶಕವಾಗಿದೆ. "It was undertaken not from a thirst after honour or emolument, but from a humble desire of promoting the propagation of the glorius gospel, and it was continued by the energy of this desire..." ಅದರಂತೆ ಅವರು ಇಲ್ಲಿಯ ಭಾಷೆಗಳನ್ನು ಕಲಿತುದು, ಶಾಲೆಗಳನ್ನು ಸ್ಥಾಪಿಸಿದುದು, ರುಗ್ಣಾಲಯಗಳನ್ನು ನಡೆಸಿದುದು. ಇವೆಲ್ಲ ಮತ ಪ್ರಸಾರಕ್ಕೆ ಒಂದಿಲ್ಲೊಂದು ರೀತಿಯಲ್ಲಿ ಪೋಷಕವಾಗಲೆಂದೇ. ಅವರು ರಚಿಸಿದ ಮತೀಯ ಸಾಹಿತ್ಯವು ಪ್ರತ್ಯೇಕವಾಗಿಯೇ ಉಳಿಯಿತಲ್ಲದೆ, ದೇಶೀಯ ಸಾಹಿತ್ಯ ವಾಹಿನಿಯ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡಲಿಲ್ಲವೆಂಬುದನ್ನು ಗಮನಿಸಬೇಕು"[೮] ಎನ್ನುತ್ತಾರೆ.

ಹೀಗಾಗಿ ಈ ಕಾಲದ ಜ್ಞಾನ ಸಂಬಂಧಿ ಕ್ರಿಯೆಗಳ ಹಿಂದಿನ ತುರ್ತು ಜ್ಞಾನ ಗಳಿಕೆಯ ಕಾರಣ ಮಾತ್ರವಾಗಿರದೆ, ತಾನು ಸ್ಥಾಪಿಸ ಹೊರಟ ಧಾರ್ಮಿಕ ವಸಾಹತಿನ ಒಳ ಹೊರಗುಗಳನ್ನು ತನ್ನ ಯೋಚನೆಗೆ ಅಂತರ್ಗತ ಮಾಡಿಕೊಳ್ಳಬೇಕೆಂಬ ತುರ್ತು ಇದ್ದಂತಿವೆ. ಈ ಮೇಲಿನ ಮಾತಿನಲ್ಲಿ ಆ ಧ್ವನಿ ಅಡಗಿದೆ. ಸಾಹಿತ್ಯ ಚರಿತ್ರೆಯನ್ನು ಮುಂದೆ ಎರಡು ಮುಖ್ಯ ಭಾಗಗಳಲ್ಲಿ ವಿಂಗಡಿಸಿಕೊಳ್ಳಲಾಗುತ್ತದೆ. ಇದರಲ್ಲಿ ಮಿಷನರಿ ಕಾಲಘಟ್ಟದ ಸಾಹಿತ್ಯ ಚರಿತ್ರೆ ಮತ್ತು ದೇಸಿ ಪಂಡಿತರ ಸಾಹಿತ್ಯ ಚರಿತ್ರೆ ಎಂದು ಗುರುತಿಸಲಾಗುತ್ತದೆ. ಇದರಲ್ಲಿ ಮಿಷನರಿ ವಿದ್ವಾಂಸರ ಸಾಹಿತ್ಯ ಚರಿತ್ರೆಯಲ್ಲಿ ಬಹಳ ಮುಖ್ಯವಾದ ಸಂಗತಿ ಎಂದರೆ ಅದು ಬೌದ್ಧಿಕ ಜಗತ್ತಿನ ಅಪೇಕ್ಷೆಯಾಗಿರದೆ, ಅದು ಆ ಕಾಲದ ಪ್ರಭುತ್ವದ ವ್ಯವಸ್ಥೆಯ ಅಪೇಕ್ಷೆಯಾಗಿತ್ತು ಎಂಬುದನ್ನು ತಿಳಿದರೆ ಸಾಹಿತ್ಯ ಚರಿತ್ರೆಯು ಹೇಗೆ ರೂಪುಗೊಂಡಿತು ಮತ್ತು ಚಾರಿತ್ರಿಕವಾಗಿ ಈ ಚರಿತ್ರೆ ಕಟ್ಟುವ ಪ್ರಕ್ರಿಯೆಯ ಹಿಂದಿನ ತುರ್ತುಗಳನ್ನು ಗುರುತಿಸಲು ಸಾಧ್ಯವಾಗುತ್ತದೆ.

ಕನ್ನಡದಲ್ಲಿ ಈ ಪ್ರಕ್ರಿಯೆ ಪ್ರಾರಂಭವಾಗುವ ಮೊದಲೇ ಕಾಲ್ಡ್‌ವೆಲ್‌ನ ದ್ರಾವಿಡ ಭಾಷಾ ಸಿದ್ಧಾಂತ ರೂಪುಗೊಂಡಿತ್ತು. ಮತ್ತೊಂದು ಕಡೆ ಮಲೆಯಾಳಿ ಭಾಷೆಯಲ್ಲಿ ಗುಂಡರ್ಟ್ ಮಲೆಯಾಳಿ– ಇಂಗ್ಲೀಷ್ ಕೋಶದ ರಚನೆಯನ್ನು ಮಾಡಿದ್ದನು. ಇದನ್ನು ಹಿನ್ನೆಲೆಯಾಗಿಟ್ಟುಕೊಂಡೇ ಕನ್ನಡದಲ್ಲಿ ಶಬ್ದಕೋಶ, ಹಳೆಗನ್ನಡ ಕಾವ್ಯ ಸಂಗ್ರಹ ಹಾಗೂ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಕ್ರಿಯೆ ಮುಂದುವರಿದುಕೊಂಡು ಬಂದಿತು.

ಮತ ಪ್ರಸಾರದ ಹಿನ್ನಲೆಯಿಂದ ಬಂದು ಇಲ್ಲಿ ನಡೆಸಿದ ಜ್ಞಾನ ಸಂಬಂಧಿ ಕ್ರಿಯೆಗಳು ನಂತರದ ಕಾಲಘಟ್ಟದಲ್ಲಿ ನೋಡಿದಾಗ ಅಪೂರ್ವವಾದ ಸಾಧನೆಗಳಾಗಿ ಕಾಣುತ್ತವೆ. ಇಲ್ಲಿ

ಉದ್ದೇಶವನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಜರ್ಮನಿಯಿಂದ ಬಂದ ವಿದ್ವಾಂಸರಾರೂ ಕನ್ನಡದ ನೆಲಕ್ಕೆ ಬಂದದ್ದು ಜ್ಞಾನದ ಆಕರ್ಷಣೆಯಿಂದ ಅಲ್ಲ. ಜ್ಞಾನ ಸಂಬಂಧಿ ಚಟುವಟಿಕೆಯನ್ನು ನಡೆಸುವುದಕ್ಕೂ ಅಲ್ಲ. ಮತ ಪ್ರಸಾರದ ಉದ್ದೇಶಕ್ಕಾಗಿ ಬಂದವರು ಇಲ್ಲಿ ಭಾಷೆ ಸಾಹಿತ್ಯ ಸಂಗತಿಗಳಿಂದ ಆಕರ್ಷಿತರಾಗಿ ಈ ಕೆಲಸವನ್ನು ಮಾಡಿದರು. "ಈ ಸಂಗತಿಯನ್ನು ಬಹಳ ಸ್ಪಷ್ಟವಾಗಿ ಗುರುತಿಸಿದವರು ಹಾರ್ವರ್ಡ್ ವಿಶ್ವ ವಿದ್ಯಾಲಯದ ಪ್ರೀತಿಮ್ ಸೊರೊಕಿನ್. "Western Christiondom has invaded all other contitents; its armies followed by its priests and merchants have subjegaled, robbed or pillaged most of the non- Christian nations. Native American, African, Austalian and Asiatic populations have been subjected to this peculiar brand of Christian 'love' which has generally manifested itself in pitiless extermination, enslavement, coercion, destruction of the cultural values, institutions and ways of life of the victims. Incidentally the west did bring them a modicum of real christianity help and protection (in the form of hospital and medical services), loving, sympathy, education, freedom and democracy. But these blessings were but a drop in the bucket, a mere 'by product' so to speak." *

(Reconstruction of Humanity- P- 47)

ಈ ಕೆಲಸಗಳನ್ನು ನಾವು ವಿಮರ್ಶಿಸಬೇಕಾದುದು ನಮ್ಮ ಸಂದರ್ಭದಲ್ಲಿ ಇಟ್ಟಲ್ಲ. ಆಗಿನ ಸ್ಥಿತಿಗತಿಯ ಹಿನ್ನಲೆಯಲ್ಲಿ ಇಟ್ಟು ನೋಡಬೇಕು. ಸೊರೊಕಿನ್ ಹೇಳಿದಂತೆ 'by product' ನ ಸ್ವರೂಪದಲ್ಲಿ ದೇಶೀಯ ಭಾಷೆ ಸಾಹಿತ್ಯದ ಕಾರ್ಯಗಳು ನಡೆದಿದೆ.

ಇನ್ನೊಂದು ಕಡೆ ಇದೇ ಸಂದರ್ಭದಲ್ಲಿ ದೇಶೀಯ ಪಂಡಿತ ವರ್ಗವೊಂದು ಸಾಹಿತ್ಯ ಚರಿತ್ರೆಯ ಕೆಲಸವನ್ನು ಕೈಗೊಂಡಿತು. ಈ ಕೆಲಸದ ಹಿಂದಿನ ಉದ್ದೇಶವನ್ನು ಕವಿ ಚರಿತೆಕಾರರೇ ಹೀಗೆ ಹೇಳುತ್ತಾರೆ. "ಕನ್ನಡಿಗರಿಗೆ ತಮ್ಮ ನಾಡು-ನುಡಿಗಳಲ್ಲಿ ಗೌರವ ಬುದ್ಧಿಯೂ ಆದರಾತಿಶಯವೂ ಹುಟ್ಟಿ ಅವುಗಳ ಏಳಿಗೆಗಾಗಿ ಉತ್ಸಾಹದಿಂದ ಒಡಗೂಡಿದ ಪ್ರಯತ್ನವೂ ಉಂಟಾಗಬೇಕೆಂಬ

ಉದ್ದೇಶ."[೬] ತನ್ನ ನಾಡಿನ ಕವಿಗಳ ಚರಿತೆಯನ್ನು ಕಟ್ಟುವ ಕ್ರಿಯೆಯ ಉದ್ದೇಶದಲ್ಲಿ ಮಿಷನರಿ ಮತ್ತು ದೇಶೀಯ ವಿದ್ವಾಂಸರ ನಡುವೆ ಈ ಬಗೆಯ ಭಿನ್ನತೆಯನ್ನು ಗುರುತಿಸಬಹುದು.

ಸಾಹಿತ್ಯ ಚರಿತ್ರೆಯಂತಹ ಒಂದು ಜ್ಞಾನವನ್ನು ಕಟ್ಟುವಲ್ಲಿ ಇದ್ದ ಪ್ರೇರಣೆಯನ್ನು ಇಲ್ಲಿ ಗುರುತಿಸಬೇಕು. ಸಾಹಿತ್ಯ ಚರಿತ್ರೆಯನ್ನು ಬೇರೆ ಬೇರೆ ಸಂದರ್ಭದಲ್ಲಿ ಕಟ್ಟುವ ಹಿಂದೆ ಯಾವ ಬಗೆಯ ಪ್ರೇರಣೆಗಳು ಇತ್ತು ಎಂಬುದನ್ನು ನೋಡಬೇಕು. ಈ ಮೇಲಿನ ಹಿನ್ನೆಲೆಯಿಂದಲೇ ಪ್ರೇರಣೆಯನ್ನು ನಾವು ಶೋಧಿಸಬಹುದು.

ಕನ್ನಡ ಸಾಹಿತ್ಯ ಚರಿತ್ರೆಯೂ ಒಳಗೊಂಡಂತೆ ಭಾರತದ ಇತಿಹಾಸ, ಸಂಸ್ಕೃತಿಯ ಅಧ್ಯಯನಕ್ಕೆ ಮುಖ್ಯವಾದ ತಾತ್ವಿಕ ನೆಲೆಗಳನ್ನು ಹಾಕಿಕೊಟ್ಟವರು 18–19ನೇ ಶತಮಾನದ ಯುರೋಪಿಯನ್ ಓರಿಯಂಟಲಿಸ್ಟರೇ. ಜಗತ್ತಿನ ಪೂರ್ವ ಭಾಗದಲ್ಲಿ ಮುಖ್ಯವಾಗಿ ಭಾರತದ ಬಗ್ಗೆ ಕುತೂಹಲ ತಾಳಿದವರು ಯುರೋಪಿಯನ್ ವರ್ತಕರು ಮತ್ತು ಮತ ಪ್ರಚಾರಕರು. ಇವರ ಕಲ್ಪನೆಯ ಚೌಕಟ್ಟಿನಲ್ಲಿ ಭಾರತದ ಚಿತ್ರವು ರೂಪುಗೊಳ್ಳುತ್ತಿತ್ತು. 18–19ನೇ ಶತಮಾನದಲ್ಲಿ ಪಶ್ಚಿಮವು ಕ್ರಮೇಣವಾಗಿ ಪೂರ್ವ ಭಾಗದ ಮೇಲೆ ಧಾರ್ಮಿಕವಾಗಿ, ರಾಜಕೀಯವಾಗಿ ಮತ್ತು ಬೌದ್ಧಿಕವಾಗಿ ಪ್ರಭುತ್ವವನ್ನು ಹೇರುವ ಶಕ್ತಿಯಾಯಿತು.

ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಹಿಂದಿನ ಗ್ರಹಿಕೆ ಮಾತ್ರ ಇಲ್ಲಿನವರಿಗೆ ಚಾರಿತ್ರಿಕ ಪ್ರಜ್ಞೆ ಇಲ್ಲ. ನಿಜವಾದ ಚರಿತ್ರೆಯನ್ನು ವಿಶಾಲವೂ, ವಿಮರ್ಶಾತ್ಮಕವೂ ಆದ ಕ್ರಮದಲ್ಲಿ ಸಂಕಲ್ಪಿಸುವ ಶಕ್ತಿಯು ಎಂದಾದರೂ ಇತ್ತೇ ಎನ್ನುವುದು ಬಹಳ ಪ್ರಶ್ನಾಸ್ಪದವಾಗಿದೆ ಎನ್ನುವ ಧೋರಣೆಯನ್ನು ಹೊಂದಿತ್ತು. 18–19ನೇ ಶತಮಾನದಲ್ಲಿ ಪಶ್ಚಿಮದಲ್ಲಾದ ವೈಜ್ಞಾನಿಕ ಬೆಳವಣಿಗೆ ಹಾಗೂ ಸಾಧನೆಗಳು, ಜಗತ್ತನ್ನು ಅಂಗೈಯಲ್ಲಿ ಗ್ರಹಿಸಬಲ್ಲೆವೆನ್ನುವಷ್ಟು ಉತ್ಸಾಹವನ್ನು ತೋರಿಸಿತು. ಈ ರೀತಿಯ ಮನೋಭಾವ ಅಧ್ಯಯನದ ಹಲವು ಶಿಸ್ತುಗಳಲ್ಲೂ ಪ್ರೇರಣೆಯನ್ನು ಉಂಟು ಮಾಡಿತು. ಸಾಹಿತ್ಯ, ಸಾಹಿತ್ಯ ಚರಿತ್ರೆ, ಚರಿತ್ರೆ ಮುಂತಾದ ಶಿಸ್ತುಗಳನ್ನು ನೋಡುವ ಬಗೆಯೊಂದನ್ನು ಈ ಖಚಿತ ವಿನ್ಯಾಸವನ್ನು ಒತ್ತಿ ಹೇಳುವ ವೈಜ್ಞಾನಿಕ ಬೆಳವಣಿಗೆಯ ಸ್ವರೂಪಗಳು ರೂಪಿಸತೊಡಗಿದವು. ಈ ರೀತಿಯ ನಿಖರತೆಗಳು ಸಾಹಿತ್ಯ ಚರಿತ್ರೆಯಲ್ಲಿ ಇರಬೇಕು ಎಂಬ ಚಿಂತನೆಗಳು ಕನ್ನಡದಲ್ಲಿ ಈವರೆಗೆ ಲಭ್ಯವಿರುವ ಸಾಹಿತ್ಯ ಕೃತಿಗಳು ಹಾಗೂ ಗೊತ್ತಾದ ಕವಿಗಳ ಆಧಾರದಲ್ಲಿ ಅವರ ಕಾಲದ ನಿಖರತೆಯನ್ನು ಕವಿಯ ಮತದ ನಿಖರತೆಯನ್ನು ಶೋಧಿಸುವ ಕೆಲಸಗಳು ಪ್ರಾರಂಭವಾಯಿತು.

ಎಫ್.ಕಿಟ್ಟೆಲ್, ಇ.ಪಿ.ರೈಸ್ ಮೊದಲಾದ ಮಿಷನರಿಗಳು ಕನ್ನಡದ ಬಗೆಗೆ ಮಾಡಿದ ಕೆಲಸಗಳು ಮುಂದೆ ಇಲ್ಲಿನ ವಿದ್ವಾಂಸರಲ್ಲಿ ಒಂದು ಎಚ್ಚರವನ್ನು ಉಂಟು ಮಾಡಿತು.

ಪರಿಣಾಮವಾಗಿ ಅದೇ ಶಿಸ್ತಿನಿಂದ ಇಲ್ಲಿಯ ವಿದ್ವಾಂಸರೂ ಕೂಡ ಶೋಧನೆಗೆ ತೊಡಗಿದರು. ಇದು ಆರ್. ನರಸಿಂಹಾಚಾರ್ಯ, ಗೋವಿಂದ ಪೈ, ಎ. ವೆಂಕಟ್‌ಸುಬ್ಬಯ್ಯ ಇವರ ಬರವಣಿಗೆಯನ್ನು ನೋಡಿದಾಗ ತಿಳಿದು ಬರುತ್ತದೆ. ಕಾಲದ ನಿಖರತೆಗಾಗಿ ಇವರು ಮಾಡಿಕೊಳ್ಳುತ್ತಿದ್ದ ವಾದಗಳನ್ನು ಗಮನಿಸಿದಾಗ ಇದು ಸ್ಪಷ್ಟವಾಗುತ್ತದೆ. ಇದಕ್ಕೆ ಸ್ಪಷ್ಟ ನಿದರ್ಶನ ಆರ್. ನರಸಿಂಹಾಚಾರ್ಯರ 'ಕರ್ನಾಟಕ ಕವಿಚರಿತೆ'ಯ 3ನೇ ಸಂಪುಟದಲ್ಲಿ 19ನೇ ಶತಮಾನದ ಕವಿಗಳ ಕುರಿತ ಹಾಗೆ ಬರೆಯುವ ಮಾದರಿ.

"ಸಿದ್ಧರಾಮ ಶಿವಯೋಗಿ: ಇವನು ವೀರಶೈವ ಕವಿ. ತಾಂಡೂರು ಹೊಸ ಪೇಟೆ ನಿಜಮಠಕ್ಕೆ ಸೇರಿದವನು. ಗ್ರಂಥ ಚೆನ್ನಬಸವಾಭ್ಯುದಯ."[೭]

"ಮೋಟಗಾನ ಹಳ್ಳಿ ಶಂಕರ ಶಾಸ್ತ್ರಿ: ಈತನು ಸ್ಮಾರ್ತಕವಿ. ಗ್ರಂಥ: ಇಂದ್ರಸಭಾ ನಾಟಕ."[೮]

"ಕೆರೂರು ವಾಸುದೇವಾಚಾರ್ಯ: ಈತನು ಬ್ರಾಹ್ಮಣನು, ಧಾರವಾಡ ಪ್ರಾಂತದವನು. ಗ್ರಂಥಗಳು– ಇಂದಿರಾ ಯದುಮಹಾರಾಜ, ನಳದಮಯಂತಿ ನೀಳ್ಗತೆಗಳು."[೯]

"ಗುಲವಾಡಿ ವೆಂಕಟರಾಯ: ಇವನು ಸಾರಸ್ವತ ಬ್ರಾಹ್ಮಣನು, ಮಂಗಳೂರು ಪ್ರಾಂತದಲ್ಲಿ ಪೋಲೀಸ್ ಇನ್ಸ್‌ಪೆಕ್ಟರ್‌ರಾಗಿದ್ದನು. ಗ್ರಂಥಗಳು: ಇಂದಿರಾ ಬಾಯಿ, ಬಾಗೀರಥಿ, ಸೀಮಂತಿನಿ."[೧೦]

ಹೀಗೆ ಕವಿ ಚರಿತೆಯನ್ನು ನೀಡುತ್ತಾ ಕೊನೆಯಲ್ಲಿ ಹೀಗೆ ಹೇಳುತ್ತಾರೆ. "ಜೀವಂತವಾಗಿರುವ ಗ್ರಂಥ ಕರ್ತೃಗಳ ಮತ್ತು ಅವರ ಗ್ರಂಥಗಳ ಹೆಸರನ್ನೂ ಎತ್ತುವುದಿಲ್ಲವೆಂದು ಹಿಂದೆಯೇ ತಿಳಿಸಿದ್ದೇವೆ"[೧೧] ಎಂದು ಮುಗಿಸುತ್ತಾರೆ. ಬಹಳ ಪ್ರಾಚೀನ ಕವಿಗಳ ಬಗೆಗೆ ಹೇಳುವಾಗ ಒಂದು ಉತ್ಸಾಹ, ವಿಸ್ತಾರಗಳು ಇಲ್ಲಿ ಬಂದಿಲ್ಲ. ಇದಕ್ಕೆ ಮುಖ್ಯವಾಗಿ ಕಾರಣ 'ಚರಿತ್ರೆ'ಯ ಕುರಿತ ದೃಷ್ಟಿಕೋನ. ಸಾಹಿತ್ಯ ಚರಿತ್ರೆ ಎಂದರೆ ಬದುಕುವ ನಮ್ಮಿಂದ ಭಿನ್ನವಾದಂಥದ್ದೂ, ಪ್ರಾಚೀನವಾದದ್ದೂ ಎನ್ನುವ ಧೋರಣೆಯಿಂದ ಬಂದದ್ದು. ಇತಿಹಾಸವು ಚಲನಶೀಲವಾದ ಗತಿಯನ್ನು ಹೊಂದಿರುತ್ತದೆ ಎಂಬ ತಾತ್ವಿಕ ನೆಲೆಯನ್ನು ಹೊಂದದೆ ಇದ್ದ ಪರಿಣಾಮ ಜೀವಂತರಾಗಿರುವ ಗ್ರಂಥಕರ್ತೃಗಳ ಬಗ್ಗೆ ತಾನು ಏನೂ ಹೇಳುವುದಿಲ್ಲ ಎಂಬ ನಿಲುವಿಗೆ ಬರಲು ಕಾರಣವಾಯಿತು.

ಮುಂದೆ ಕನ್ನಡ ಅಧ್ಯಯನ ಸಂಸ್ಥೆಯ ಸಾಹಿತ್ಯ ಚರಿತ್ರೆ ಬಂದಾಗಲೂ ಅವರು ಹೇಳುವ ಮಾತನ್ನು ಗಮನಿಸಬೇಕು. "ಅನೇಕ ಆಧುನಿಕ ಐರೋಪ್ಯ ಸಾಹಿತ್ಯಗಳ ಚರಿತ್ರೆಗೆ ದೊರೆಯುವ

ಸಾಕ್ಷ್ಯಾಧಾರಗಳು ನಮಗೆ ದೊರೆಯುವುದಿಲ್ಲ ಎಂಬ ವ್ಯಥೆ ನಿರಾಶೆಗಳು ನಮ್ಮನ್ನು ಕಾಡುತ್ತವೆ. ಇದು ಅಪರಿಹಾರ್ಯವಾದ ದಾರಿದ್ರ್ಯ. ಆದರೆ ಮುಂದಿನ ಚರಿತ್ರೆಕಾರನಿಗೆ ಇಂದಿನ ಸಾಹಿತ್ಯದ ಬಗೆಗೆ ಅಗತ್ಯವಾದ ಮಾಹಿತಿಗಳ ಸಿದ್ಧತೆ, ರಕ್ಷಣೆಗಳು ನಮ್ಮ ಪಾಲಿನ ಜವಾಬ್ದಾರಿಯಾಗಿದೆ ಎಂಬುದನ್ನು ಮರೆಯಬಾರದು. ಇದುವರೆಗೂ ನಮ್ಮ ಪಾಲಿಗೆ ಇಲ್ಲವಾದ ಚಾರಿತ್ರಿಕ ದೃಷ್ಟಿಯನ್ನು ನಾವು ಇನ್ನಾದರೂ ಬೆಳೆಸಿಕೊಳ್ಳಬೇಕು"[೧೨] ಎಂದು ಹಾ.ಮಾ. ನಾಯಕರು ಅಭಿಪ್ರಾಯ ಪಡುತ್ತಾರೆ. ಇದು ಇಡೀ ಕನ್ನಡ ಸಾಹಿತ್ಯ ಚರಿತ್ರೆಯ ಚರಿತ್ರೆಯನ್ನು ನೋಡಿದರೆ ಕಾಣುವ ಹಳಹಳಿಕೆ. ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಅಂದಿನ ಮುಖ್ಯವಾದ ಪ್ರೇರಣೆಯೇ ತಮ್ಮಲ್ಲಿ ಈವರೆಗೆ ಇಲ್ಲದಿರುವ ಚಾರಿತ್ರಿಕ ಪ್ರಜ್ಞೆಯನ್ನು ನೀಗಿಸಿ ಇನ್ನು ಮುಂದೆ ಬೆಳೆಸಿಕೊಳ್ಳುವ ಪ್ರಕ್ರಿಯೆ ಎಂಬಂತೆ ಬಂದಿದೆ. ಚಾರಿತ್ರಿಕ ದೃಷ್ಟಿ ಇರಲಿಲ್ಲ ಎನ್ನುವಾಗ ಅವರಲ್ಲಿ ಬಹಳ ಸ್ಪಷ್ಟವಾಗಿ ಇರುವುದು ಐರೋಪ್ಯ ಮಾದರಿಯ ಚಾರಿತ್ರಿಕ ದೃಷ್ಟಿ ಎನ್ನುವುದು. ಸಾಹಿತ್ಯದ ಮೂಲಕ ಭಾಷೆಯೇ ಒಂದು ಜನಮುಖಿಯಾದ ಚರಿತ್ರೆಯನ್ನು ಕಟ್ಟಿಕೊಂಡಿರುತ್ತದೆ. ಈ ಬಗೆಯ ಚರಿತ್ರೆಯ ಜೊತೆ ಈ ಚರಿತ್ರೆಕಾರರಿಗೆ ಅನುಸಂಧಾನವನ್ನು ಮಾಡಿಕೊಳ್ಳುವುದಕ್ಕೆ ಸಾಧ್ಯವಾಗಲಿಲ್ಲ.

ಹೀಗೆ ಸಾಹಿತ್ಯ ಚರಿತ್ರೆಯ ರಚನೆಯ ಹಿಂದಿನ ಪ್ರೇರಣೆ ಮತ್ತು ಅದರ ಹಿನ್ನೆಲೆಯನ್ನು ಇಲ್ಲಿ ಗಮನಿಸಲಾಗಿದೆ.

## ೩.೩ ಸಾಹಿತ್ಯ ಚರಿತ್ರೆಯ ಬೆಳವಣಿಗೆಯ ಘಟ್ಟಗಳು

ಕನ್ನಡದಲ್ಲಿ ಸಾಹಿತ್ಯ ಚರಿತ್ರೆಯ ಕೆಲಸಗಳು ಮೊದಲ ಬಾರಿಗೆ ಬಹಳ ಆಧುನಿಕ ಕಾಲದಲ್ಲಿ ಅಂದರೆ ಮಿಷನರಿ ಕಾಲಘಟ್ಟದಲ್ಲಿ ಪ್ರಾರಂಭವಾಯಿತಾದರೂ ಅದರ ದೇಶೀ ಲಕ್ಷಣಗಳು ಬಹಳ ಹಿಂದೆಯೇ ಕನ್ನಡದ ಮೊದಲ ಲಿಖಿತ ದಾಖಲೆಯಾಗಿ ನೋಡುತ್ತಿರುವ ಕವಿರಾಜ ಮಾರ್ಗದಲ್ಲಿ ಕಾಣುತ್ತದೆ. ಕವಿರಾಜ ಮಾರ್ಗಕಾರ ತನಗಿಂತ ಹಿಂದಿನ ಗದ್ಯಪದ್ಯ ಕವಿಗಳನ್ನು ಹೆಸರಿಸುವ ಮೂಲಕ ಒಂದು ನೆಲೆಯ ಸಾಹಿತ್ಯ ಚರಿತ್ರೆಗೆ ನಾಂದಿಯನ್ನು ಹಾಡಿದ್ದಾನೆ. ಕವಿರಾಜಮಾರ್ಗಕಾರ

'ಗದ್ಯಗ್ರಂಥ ಕರ್ತೃಗಳ್' ಎಂದು ಹೇಳಿ:

> ವಿಮಲೋದಯನಾಗಾರ್ಜುನ
> ಸಮೇತಜಯಬಂಧು ದುರ್ವಿನೀತಾದಿಗಳೀ
> ಕ್ರಮದೊಳ್ ನೆಗಳ್ತೆ ಗದ್ಯಾ
> ಶ್ರಮಪದಗುರುತಾಪ್ರತೀತಿಯಂ ಕೆಯ್ಕೊಂಡರ್॥

ಗ್ರಂಥದಲ್ಲಿಯೂ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಒಂದು ಅಧ್ಯಾಯವನ್ನು ಸೇರಿಸಿದ್ದಾರೆ. ಹೀಗೆ ಕಿಟ್ಟೆಲ್ ಮತ್ತು ಬಿ.ಎಲ್. ರೈಸ್‌ರ ಸಾಹಿತ್ಯ ಚರಿತ್ರೆಯ ರಚನೆಯನ್ನು ಒಂದು ಘಟ್ಟವೆಂದು ಪರಿಗಣಿಸಬಹುದು.

ಕನ್ನಡ ಸಾಹಿತ್ಯ ಚರಿತ್ರೆಯ ರಚನೆಯಲ್ಲಿ ಒಂದು ಹೊಸತನದ ಸೆಳೆಯನ್ನು ಮೊದಲು ಬಹು ಸಮಗ್ರವಾಗಿ ತೋರಿಸಿಕೊಟ್ಟವರು ಆರ್. ನರಸಿಂಹಾಚಾರ್ಯರು. ಅವರು 3 ಸಂಪುಟಗಳಲ್ಲಿ ಪ್ರಕಟಿಸಿದ 'ಕರ್ನಾಟಕ ಕವಿಚರಿತೆ' ಸಾಹಿತ್ಯ ಚರಿತ್ರೆಯನ್ನು ರೂಪಿಸಲು ಬೇಕಾದ ಬಹುದೊಡ್ಡ ಆಕರ ಸಾಮಗ್ರಿ ಎಂದೇ ಪರಿಗಣಿಸಲಾಗಿದೆ. 1907, 1919, 1929ರಲ್ಲಿ ಈ ಸಂಪುಟಗಳು ಪ್ರಕಟವಾಗಿ ಕವಿಗಳ ಕಾಲ, ದೇಶ, ಜೀವನ, ಕೃತಿಗಳಿಗೆ ಸಂಬಂಧಿಸಿದ ವಿವರವಾದ ಪಟ್ಟಿಯನ್ನು ಕೃತಿ ಪರಿಚಯಕ್ಕೆ ಅನುಕೂಲವಾಗುವ ದೃಷ್ಟಿಯಿಂದ ಆಯ್ದ ಉದಾಹರಣೆಗಳನ್ನು ಈ ಸಂಪುಟಗಳಲ್ಲಿ ಕೊಟ್ಟಿದ್ದಾರೆ. ಸಾಹಿತ್ಯ ಚರಿತ್ರೆಯಿಂದ ಪ್ರಾರಂಭವಾಗಿ ಈ ಘಟ್ಟದಲ್ಲಿ ಕವಿಚರಿತೆಯೆಂಬ ಹೊಸ ಬಗೆಯೊಂದು ಬಂದಿತು.

ಇ.ಪಿ. ರೈಸ್‌ರು 1915ರಲ್ಲಿ ಪ್ರಕಟಿಸಿದ "A History of Kanarese Literature" ಎಂಬ ಪುಸ್ತಕವನ್ನು ಪ್ರಕಟಿಸಿದರು. ತಮ್ಮ ಕಾಲದವರೆಗೆ ನಡೆದಿದ್ದ ಶೋಧನೆಗಳನ್ನೆಲ್ಲಾ ಕ್ರೋಡೀಕರಿಸಿ ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ಕುರಿತು ಒಂದು ನಿರೂಪಣೆಯನ್ನು ಕೊಡಲು ಇಲ್ಲಿ ಪ್ರಯತ್ನಿಸಲಾಗಿದೆ.

ಡಾ. ಎ. ವೆಂಕಟಸುಬ್ಬಯ್ಯನವರು 1927ರಲ್ಲಿ ಪ್ರಕಟಿಸಿದ 'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ' ಎಂಬ ಕೃತಿ ಕನ್ನಡ ಸಾಹಿತ್ಯ ಚರಿತ್ರೆಯ ನಮ್ಮ ಬಹುತೇಕ ಪರಿಶೀಲನೆಗಳಿಂದ ಹೊರಗೆ ಉಳಿದಿದೆ. ಇದು "ಕರ್ನಾಟಕ ಕವಿಚರಿತೆ"ಗೆ ನೀಡಿದ ಪ್ರತಿಕ್ರಿಯೆ. ಆರ್.ನರಸಿಂಹಾಚಾರ್ಯರು ಕನ್ನಡ ಕವಿಗಳ ಕಾಲ ಜೀವನ ಕುರಿತು ತಪ್ಪಾಗಿ ಗುರುತಿಸಿದ್ದಾರೆ ಎಂಬ ತಿಳುವಳಿಕೆಯಿಂದ ಬಂದ ಪ್ರತಿಕ್ರಿಯೆ ಇದು. ಆದರೆ ಇದು ಸಾಹಿತ್ಯ ಚರಿತ್ರೆಯನ್ನು ಪ್ರಜ್ಞಾಪೂರ್ವಕವಾಗಿ ಕಟ್ಟುವ ಮಾದರಿಯಲ್ಲಿ ಇಲ್ಲ. ಈ ಮೂರು ಜನರ ಸಾಹಿತ್ಯ ಚರಿತ್ರೆಯ ಪ್ರಯತ್ನಗಳನ್ನು ಇನ್ನೊಂದು ಘಟ್ಟವಾಗಿ ಗುರುತಿಸಬಹುದು.

1947ರಲ್ಲಿ ಪ್ರಕಟವಾದರೂ, 1929ಕ್ಕಿಂತ ಮೊದಲೇ ಬರೆಯಲಾರಂಭಿಸಿದ 'ಕನ್ನಡ ಕೈಪಿಡಿ'ಯ ಕರ್ತೃ ಬಿ.ಎಂ ಶ್ರೀಕಂಠಯ್ಯನವರ ಪ್ರಯತ್ನದಲ್ಲಿ ಸಾಹಿತ್ಯವನ್ನು ಪ್ರಿಯಗೊಳಿಸುವ ಕಡೆಗೆ ಗಮನ ಹರಿಸಿದ್ದಾರೆ. ಕೈಪಿಡಿಯ ರಚನೆಯ ಉದ್ದೇಶವೇ ಸೀಮಿತವಾದುದರಿಂದ ಅನೇಕ ಮಿತಿಗಳು ಇಲ್ಲಿವೆ. ಆದರೂ ಸಾಹಿತ್ಯ ಚರಿತ್ರೆಯೊಂದರ ರಚನೆಗೆ ಭೂಮಿಕೆ ಸಿದ್ಧಗೊಳ್ಳಲು ಇದು

"ಪದ್ಯಗ್ರಂಥಕರ್ತೃಗಳ್" ಎಂದು ಹೇಳಿ:

'ಪರಮಶ್ರೀವಿಜಯಕವೀ
ಶ್ವರಪಂಡಿತಚಂದ್ರ ಲೋಕ ಪಾಲಾದಿಗಳೀ
ನಿರತಿಶಯ ವಸ್ತು ವಿಸ್ತರ
ವಿರಚನೆ ಲಕ್ಷ್ಯಂ ತದಾದ್ಯಕಾವ್ಯಕ್ಕೆಂದುಂ॥

ಎನ್ನುತ್ತಾನೆ. ಇದುವೇ ಕನ್ನಡದ ಮೊದಲ ಕವಿಚರಿತೆ. ಮುಂದೆ ಕನ್ನಡ ಸಾಹಿತ್ಯ ಚರಿತ್ರೆಯ ರಚನೆಯ ವ್ಯವಸ್ಥಿತ ಪ್ರಯತ್ನಗಳು ನಡೆದದ್ದು ಮಿಷನರಿ ಕಾಲಘಟ್ಟದಲ್ಲಿ. ಮತ ಪ್ರಸಾರದ ಉದ್ದೇಶದಲ್ಲಿ ಬಂದ ಮಿಷನರಿಗಳು ಮತ್ತು ಆಡಳಿತ ನಡೆಸಲು ಬಂದ ಅಧಿಕಾರಿಗಳಿಂದ. ಸಾಹಿತ್ಯ ಚರಿತ್ರೆಯೊಂದರ ಅವಶ್ಯಕತೆಯನ್ನು ಮನಗಂಡು ಆ ಕೆಲಸವನ್ನು ಮೊದಲ ಬಾರಿಗೆ ಕೈಗೊಂಡವನು ಫರ್ಡಿನಂಡ್ ಕಿಟ್ಟೆಲ್. 'Old Canarese Literature' ಎಂಬ ಪ್ರಬಂಧವನ್ನು ಬರೆದ ಇವರು 1874ರಲ್ಲಿ ಕನ್ನಡ ಸಾಹಿತ್ಯದ ಕುರಿತು ನಾವು ಸಿದ್ಧಪಡಿಸಿದ ಸಮೀಕ್ಷಾ ಪ್ರಬಂಧ "An Easy on Canarese Literature" ನ್ನು 'ನಾಗವರ್ಮನ ಕನ್ನಡ ಛಂದಸ್ಸು' ಎಂಬ ಕೃತಿಯಲ್ಲಿ ಪ್ರಕಟಿಸಿದರು. ಅಲ್ಲಿ ತನ್ನ ಕೆಲಸದ ಬಗೆಗೆ ಹೀಗೆ ಹೇಳಿಕೊಳ್ಳುತ್ತಾರೆ. "May the Present volume from a small contribution towards a history of canarese literature."[೧೩] ಈ ಮಾತಿನಲ್ಲೇ ಅವರ ಗುರಿ ಪ್ರಜ್ಞಾಪೂರ್ವಕವಾಗಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಕಡೆಗಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಸಾಹಿತ್ಯ ಚರಿತ್ರೆಕಾರನೊಬ್ಬ ಗಮನಿಸಬೇಕಾದ ಚರಿತ್ರೆಯ ಕೆಲವು ವಿಶಿಷ್ಟ ನಡೆಗಳನ್ನು ಗ್ರಹಿಸುವ ಪ್ರಯತ್ನವನ್ನು ಇಲ್ಲಿ ಮಾಡಿದ್ದಾರೆ. ಬಿ.ಎಮ್ ಶ್ರೀಕಂಠಯ್ಯನವರು ಹೇಳುವಂತೆ "ಕಿಟ್ಟೆಲ್ ಅವರ ಪ್ರಬಂಧವೇ ಕನ್ನಡ ಸಾಹಿತ್ಯದ ಚರಿತ್ರೆಯನ್ನು ಸಾಧಿಸುವುದಕ್ಕೆ ಮೊದಲ ಆಯುಧ ಪೂಜೆ."[೧೪] ಮೊದಲ ಸಾಹಿತ್ಯ ಚರಿತ್ರೆಯಾದರೂ ಅನೇಕ ಸಂಗತಿಗಳಲ್ಲಿ ಬಹಳ ಆಳವಾದ ವಿವೇಚನೆಯನ್ನು ಮಾಡಿದ್ದಾರೆ.

ಕನ್ನಡ ಸಾಹಿತ್ಯ ಚರಿತ್ರೆ ರಚನೆಯಲ್ಲಿ ಕಿಟ್ಟೆಲ್ ನಂತರ ಗಮನಿಸಬೇಕಾದ ಇನ್ನೊಬ್ಬರೆಂದರೆ ಬಿ.ಎಲ್ ರೈಸ್. 1876ರಲ್ಲಿ ಅವರು ಪ್ರಕಟಿಸಿದ 'ಮೈಸೂರು ಗೆಜೆಟಿಯರ್'ನ ಮೊದಲ ಸಂಪುಟದಲ್ಲಿ ಕನ್ನಡ ಭಾಷೆಗೆ ಸಂಬಂಧಿಸಿದ ಚಿಕ್ಕ ಅಧ್ಯಾಯವೊಂದನ್ನು ಸೇರಿಸಿ ಸಾಹಿತ್ಯವನ್ನು ಪ್ರಸ್ತಾಪಿಸಿದರು. ಮುಂದೆ 1890ರಲ್ಲಿ ಪ್ರಕಟವಾದ 'ಕರ್ನಾಟಕ ಶಬ್ದಾನುಶಾಸನಂ' ಎಂಬ ಗ್ರಂಥದ ಪೀಠಿಕೆಯಲ್ಲಿ ಸಾಕಷ್ಟು ದೀರ್ಘವಾದ ಕನ್ನಡ ಸಾಹಿತ್ಯ ಚರಿತ್ರೆಯ ಪರಿಚಯ ನೀಡಿದ್ದಾರೆ. 1909ರಲ್ಲಿ ತಾವು ಪ್ರಕಟಿಸಿದ 'Mysore and Coorg from the Inscriptions' ಎಂಬ

ನೆರವಾಯಿತು. 1939ರಲ್ಲಿ ಕೆ.ವೆಂಕಟರಾಮಪ್ಪನವರ 'ಕನ್ನಡ ಸಾಹಿತ್ಯ' ಎಂಬ ಕೃತಿ ಪ್ರಕಟವಾಯಿತು. ಇದು ಗಾತ್ರದಲ್ಲಿ ಕಿರಿದಾದರೂ ಸಾಹಿತ್ಯ ಚರಿತ್ರೆಯೊಂದರ ಸಮಗ್ರ ರೂಪುರೇಷೆಗಳನ್ನು ಹೊಂದಿದ ಕೃತಿಯಾಗಿತ್ತು. 1953ರಲ್ಲಿ ಪ್ರಕಟವಾದ ರಂ.ಶ್ರೀ. ಮುಗಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ' ಅನೇಕ ಕಾರಣದಿಂದ ಗಮನಾರ್ಹ ಕೃತಿ. ಗಾತ್ರ, ವ್ಯಾಪ್ತಿ, ದೃಷ್ಟಿ, ನಿರೂಪಣೆ, ಮೌಲಿಕತೆ ಮೊದಲಾದ ಕಾರಣಗಳಿಗಾಗಿ ಮಹತ್ವದ ಕೃತಿಯಾಗಿದೆ. ಆಧುನಿಕ ಕಾಲದ ಪ್ರಾರಂಭದವರೆಗಿನ ಕನ್ನಡ ಸಾಹಿತ್ಯವನ್ನು ವ್ಯವಸ್ಥಿತವಾಗಿ ವರ್ಗೀಕರಿಸಿ ರಾಜಕೀಯ, ಸಾಮಾಜಿಕ ಅಂಶಗಳ ಹಿನ್ನೆಲೆಯಲ್ಲಿ ಕವಿ ಕೃತಿಗಳ ಮೌಲ್ಯಮಾಪನ ಮಾಡುವ ಕೆಲಸವನ್ನು ಮಾಡಿದರು. ತಮ್ಮ ಕಾಲಕ್ಕೆ ಇರಬಹುದಾದ ಸಾಮಾಗ್ರಿಗಳ ಕೊರತೆಯ ನಡುವಿನಲ್ಲೂ ಕೆಲವು ಕವಿಗಳ ವಿಚಾರದಲ್ಲಿ ಅವರು ತಾಳಿದ ನಿಲುವುಗಳು ಬಹಳ ಮುಖ್ಯವಾದದ್ದು. ಮುಗಳಿಯವರ ಸಾಹಿತ್ಯ ಚರಿತ್ರೆ ಮುಂದೆ ಬಂದ ಅನೇಕ ಸಾಹಿತ್ಯ ಚರಿತ್ರೆಯ ಕೃತಿಗಳಿಗೆ ಒಂದು ಮಾದರಿಯಾಗಿ ಉಳಿಯಿತು. 1960ರಲ್ಲಿ ಎಂ. ಮರಿಯಪ್ಪ ಭಟ್ಟರ 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ' ಮತ್ತು 1964ರಲ್ಲಿ ತ.ಸು ಶಾಮರಾಯ ಮತ್ತು ಮೆ. ರಾಜೇಶ್ವರಯ್ಯ ಅವರ 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ'ಗಳು ಬಂದರೂ ಇವು ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡ ಕೈಪಿಡಿಗಳಾಗಿದ್ದವು. ಈ ಎಲ್ಲಾ ಪ್ರಯತ್ನಗಳು ವ್ಯಕ್ತಿಗತವಾದ ನೆಲೆಯಲ್ಲಿ ನಡೆದಿದ್ದು, ತನ್ನದೇ ಆದ ಅನೇಕ ಮಿತಿಗಳನ್ನು ಕೆಲವು ಸೂಕ್ಷ್ಮತೆ ಹಾಗೂ ಒಟ್ಟು ಸಾಹಿತ್ಯ ಚರಿತ್ರೆಯಲ್ಲಿ ಒಂದು ಸಾಮಾನ್ಯ ಚೌಕಟ್ಟನ್ನು ಹೊಂದಿರುವುದನ್ನು ಕಾಣುತ್ತೇವೆ. ಇದು ಕನ್ನಡ ಸಾಹಿತ್ಯ ಚರಿತ್ರೆಯ ಮತ್ತೊಂದು ಘಟ್ಟ.

ಮುಂದೆ ಬಹಳ ಸಾಂಸ್ಥಿಕವಾಗಿ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಪ್ರಯತ್ನವನ್ನು ಮಾಡಿದ್ದು, ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರ ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಗಳು 10 ಸಂಪುಟಗಳಲ್ಲಿ ವಿಸ್ತೃತವಾಗಿ ತರುವ ಪ್ರಯತ್ನವನ್ನು ಮಾಡಿದವು. ಬೆಂಗಳೂರು ವಿ.ವಿ.ಯ ಸಮಗ್ರ 'ಕನ್ನಡ ಸಾಹಿತ್ಯ ಚರಿತ್ರೆ' ಮತ್ತು ಮೈಸೂರು ವಿ.ವಿಯ 'ಕನ್ನಡ ಸಾಹಿತ್ಯ ಚರಿತ್ರೆ'ಯಲ್ಲಿ ವಿಸ್ತಾರವಾದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಿನ್ನೆಲೆಯನ್ನು ಪರಿಚಯಿಸಲಾಗಿದೆ. ಈ ಎರಡೂ ಸಂಸ್ಥೆಗಳು ಒಬ್ಬ ಪ್ರಧಾನ ಸಂಪಾದಕನ ಅಡಿಯಲ್ಲಿ ಅನೇಕ ಜನ ಬರಹಗಾರರ ಬರವಣಿಗೆಯನ್ನು ಜೋಡಿಸಿಕೊಂಡಿದ್ದರಿಂದ ವೈವಿಧ್ಯತೆಯ ಜೊತೆ ಪರಸ್ಪರ ವಿರುದ್ಧಾಭಿಪ್ರಾಯಗಳೂ ಸೇರಿಕೊಂಡಿದೆ. ಹೀಗಿದ್ದೂ ಇದು ಬಹು ಮುಖ್ಯವಾದ ಒಂದು ದಾಖಲೆಯೇ ಆಗಿದೆ. ಇದು ಇನ್ನೊಂದು ಘಟ್ಟ. ಇವುಗಳ ನಂತರ ಸಾಹಿತ್ಯ ಚರಿತ್ರೆಯನ್ನು ಹೊಸತಾಗಿ ನೋಡಲಾಗುತ್ತದೆ ಎಂದು ಹೊರಟ ಸಿ. ವೀರಣ್ಣನವರ ಐದು

ಸಂಪುಟಗಳ ಯೋಜನೆ ಒಂದು ಸಂಪುಟದಲ್ಲೇ ನಿಂತಿದೆ. ಕೀರ್ತಿನಾಥ ಕುರ್ತಕೋಟಿ ಮತ್ತು ಎಲ್.ಎಸ್. ಶೇಷಗಿರಿ ರಾವ್ ಹೊಸಗನ್ನಡದ ಸಾಹಿತ್ಯ ಚರಿತ್ರೆಯನ್ನು ಬರೆದಿದ್ದಾರೆ.

ಒಟ್ಟಿನಲ್ಲಿ ಕನ್ನಡದಲ್ಲಿ ಬಹಳ ಸಣ್ಣ ಮಟ್ಟದಲ್ಲಿ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಪ್ರಯತ್ನ ಪ್ರಾರಂಭವಾದದ್ದು ಮುಂದೆ ವಿಸ್ತಾರವನ್ನು ಪಡೆಯುತ್ತಾ ಹೋಯಿತು. ಕಿಟ್ಟೆಲ್ ಅವರ 60 ಪುಟಗಳ ಪ್ರಬಂಧದಿಂದ ಆರಂಭಗೊಂಡು 10 ಸಂಪುಟಗಳ ಸಾವಿರಾರು ಪುಟಗಳವರೆಗೆ ವಿಸ್ತೃತವಾದ ಸಾಹಿತ್ಯ ಚರಿತ್ರೆ ರೂಪುಗೊಂಡಿದೆ.

ಈ ಅಧ್ಯಯನದಲ್ಲಿ ಮೊದಲ ಘಟ್ಟದಲ್ಲಿ ಬಂದ ನಾಲ್ಕು ಜನ ಪ್ರಾತಿನಿಧಿಕವಾದ ಸಾಹಿತ್ಯ ಚರಿತ್ರೆಕಾರರಾದ ಎಫ್. ಕಿಟ್ಟೆಲ್, ಇ.ಪಿ. ರೈಸ್, ಆರ್. ನರಸಿಂಹಾಚಾರ್ಯ, ಎ. ವೆಂಕಟಸುಬ್ಬಯ್ಯನವರನ್ನು ಮಾತ್ರ ಪರಿಶೀಲಿಸಲಾಗುತ್ತದೆ.

## ಸಂದರ್ಭ ಸೂಚಿ


೧. F Kittel : Indian Evangical Review, Missionary thought and effert Vol. 1 1874 ಪುಟ 64

೨. ರೆನೆ ವೆಲೆಕ್ ಮತ್ತು ಆಸ್ಟಿನ್ ವಾರೆನ್ (ಅನು:ಸಿ.ಪಿ.ಕೆ) ಸಾಹಿತ್ಯ ತತ್ವ, ಕಲ್ಲಯ್ಯ ಆಂಡ್ ಸನ್ಸ್ ಬೆಂಗಳೂರು 1994, ಪುಟ 33

೩. ಡಾ.ಕೆ.ಎಂ. ಮ್ಯಾಥ್ಯೂ. 'ಎಫ್. ಕಿಟ್ಟೆಲ್ – ಒಂದು ಸಮಗ್ರ ಅಧ್ಯಯನ' ಕಿಟ್ಟೆಲ್ ಕಲಾ ಮಹಾವಿದ್ಯಾಲಯ ಧಾರವಾಡ, 1994, ಪುಟ 90.

೪. ಡಾ. ಶ್ರೀನಿವಾಸ ಹಾವನೂರ 'ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ, ಹನಿಗವಿತೆ, ಕಂಪ್ಯೂಟರ್ ಇತ್ಯಾದಿ' ಅನನ್ಯ ಪ್ರಕಾಶನ, ಮೈಸೂರು 1982, ಪುಟ 76.

೫. ಅದೇ .. .. 77

೬. ಆರ್. ನರಸಿಂಹಾಚಾರ್ಯ, ಕರ್ನಾಟಕ ಕವಿಚರಿತೆ ಪ್ರಥಮ ಸಂಪುಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು (ದ್ವಿತೀಯ ಮುದ್ರಣ) 1972, ಪುಟ 23

೭. ಅದೇ .. .. ಪುಟ 229.

೮. ಅದೇ .. .. ಪುಟ 230

೯. ಅದೇ .. .. ಪುಟ 234

೧೦. ಅದೇ .. .. ಪುಟ 246

೧೧. ಅದೇ .. .. ಪುಟ 253

೧೨. ಹಾ.ಮಾ.ನಾ. (ಸಂ) ಕನ್ನಡ ಸಾಹಿತ್ಯ ಚರಿತ್ರೆ ಸಂ. 1 ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. ವಿ.ವಿ 1974 ಪುಟ 33

೧೩. F. Kittel : An Eassy on Canarese Literature ನಾಗವರ್ಮನ ಕನ್ನಡ ಛಂದಸ್ಸು 1974 ಪುಟ LXXXI

೧೪. ಬಿ.ಎಂ ಶ್ರೀಕಂಠಯ್ಯ 'ಕನ್ನಡ ಕೈಪಿಡಿ', ಸಂ. 2 1947, ಪುಟ 396

# ಅಧ್ಯಾಯ ನಾಲ್ಕು

## ೪.೦ ಮಿಷನರಿ ವಿದ್ವಾಂಸರ ಕನ್ನಡ ಸಾಹಿತ್ಯ ಚರಿತ್ರೆ:

೪.೧ ಪ್ರವೇಶ

೪.೨ ಮಿಷನರಿಗಳ ಪ್ರವೇಶ ಸಂದರ್ಭ

೪.೨.೧ ಲಂಡನ್ ಮಿಷನ್ ಸಂಸ್ಥೆ

೪.೨.೨ ಬಾಸೆಲ್ ಮಿಷನ್ ಸಂಸ್ಥೆ

೪.೩ ಸಾಹಿತ್ಯ ಚರಿತ್ರೆಯ ತಾತ್ವಿಕತೆ.

೪.೩.೧ ಎಫ್. ಕಿಟ್ಟೆಲ್‌ರ ಸಾಹಿತ್ಯ ಚರಿತ್ರೆಯ ತಾತ್ವಿಕತೆ

೪.೩.೨ ಇ.ಪಿ. ರೈಸ್ – ಶಾಸ್ತ್ರೀಯ ಸಾಹಿತ್ಯ ಚರಿತ್ರೆಯ ನಿರೂಪಕ

# ೪. ಮಿಶನರಿ ವಿದ್ವಾಂಸರ ಕನ್ನಡ ಸಾಹಿತ್ಯ ಚರಿತ್ರೆ

## ೪.೧ ಪ್ರವೇಶ

17ನೇ ಶತಮಾನದಿಂದ ಭಾರತದ ಬೇರೆ ಬೇರೆ ಪ್ರಾಂತಗಳಿಗೆ ಮತ ಪ್ರಸಾರದ ಉದ್ದೇಶದಿಂದ ಕ್ರೈಸ್ತ ಮಿಷನರಿಗಳು ಆಗಮಿಸಲಾರಂಭಿಸಿದರು. ಹೀಗೆ ಬಂದಂತಹ ಮಿಷನರಿಗಳು ಬೇರೆ ಬೇರೆ ಪ್ರದೇಶದಲ್ಲಿ ನೆಲೆ ನಿಂತು ಮಿಷನ್ ಕೇಂದ್ರಗಳನ್ನು ತೆರೆದು ಆ ಮೂಲಕ ತಮ್ಮ ಮತ ಪ್ರಸಾರದ ಕಾರ್ಯವನ್ನು ಮಾಡುತ್ತಿದ್ದರು. ಹೀಗೆ ಬಂದು ನೆಲೆ ನಿಂತ ಮಿಷನರಿಗಳಿಗೆ ಸ್ಥಳೀಯ ಸಂಸ್ಥಾನದ ರಾಜರುಗಳು, ಸ್ಥಳೀಯ ಜನರು ಅನೇಕ ಬಗೆಯಿಂದ ಸಹಕರಿಸುತ್ತಿದ್ದರು. ಹೀಗಾಗಿ ಸ್ಥಳೀಯ ಜನ ಸಮುದಾಯಗಳ ಜೊತೆ ಬೆರೆಯಲಾರಂಭಿಸಿದಾಗ ಆ ಜನ ಭಾಷೆಯನ್ನು ಅವರು ಕಲಿಯಲಾರಂಭಿಸಿದರು. ಆ ಭಾಷೆಗಳ ಸಾಹಿತ್ಯವನ್ನು ಜನರ ಸಂಸ್ಕೃತಿಯನ್ನು ಅಧ್ಯಯನ ಮಾಡತೊಡಗಿದರು. ಮುಂದೆ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಬಹಳ ಪ್ರಭಾವವನ್ನು ಉಳಿಸಿ ಹೋದವರಾದರು.

ಬಂದ ಮಿಷನರಿಗಳು ಒಂದೇ ಕಡೆಯವರಾಗಿರಲಿಲ್ಲ. ಮುಖ್ಯವಾಗಿ ಕರ್ನಾಟಕಕ್ಕೆ ಸೊಸೈಟಿ ಆಫ್ ಜೀಸಸ್, ಲಂಡನ್ ಮಿಶನ್, ವೆಸ್ಲೆಯನ್ ಮೆಥಾಡಿಸ್ಟ್ ಮಿಶನ್, ಬಾಸೆಲ್ ಮಿಶನ್ ಮೊದಲಾದವರು ಲಂಡನ್, ಜರ್ಮನಿ ಮೊದಲಾದ ದೇಶಗಳಿಂದ ಬಂದರು. ಈ ಅಧ್ಯಾಯದಲ್ಲಿ ಲಂಡನ್ ಮಿಶನ್, ಮತ್ತು ಬಾಸೆಲ್ ಮಿಶನ್‌ನ ಆಗಮನ ಅವರ ಕಾರ್ಯದ ಸ್ಥೂಲ ಪರಿಚಯ ಹಾಗೂ ಈ ಎರಡು ಮಿಶನರಿಗಳಿಂದ ಬಂದ ಫರ್ಡಿನಂಡ್ ಕಿಟ್ಟೆಲ್ ಮತ್ತು ಇ.ಪಿ. ರೈಸ್‌ರ ಒಂದು ಪರಿಚಯವನ್ನು ನೀಡಿ ಅವರು ನಡೆಸಿದ ಸಾಹಿತ್ಯ ಚರಿತ್ರೆಯ ಕಾರ್ಯವನ್ನು ವಿಶ್ಲೇಷಿಸಲಾಗುವುದು.

## ೪.೨ ಮಿಷನರಿಗಳ ಪ್ರವೇಶ – ಸಂದರ್ಭ :

ಕನ್ನಡ ನಾಡಿಗೆ ಪಾಶ್ಚಾತ್ಯ ಮಿಷನರಿಗಳ ಸಂಪರ್ಕ ಮೊದಲಾದದ್ದು ಗೋವೆಯ ಮೂಲಕ. ಅಲ್ಲಿಂದ ನೆರೆಯ ಕನ್ನಡ ಜಿಲ್ಲೆಗಳಿಗೆ ಪಾದ್ರಿಗಳು ಬಂದು ಹೋಗುತ್ತಿದ್ದರು. ಹಾಗೆಯೇ ತಮಿಳುನಾಡಿನ ಮಿಶನರಿಗಳು ಮೈಸೂರು ಸಂಸ್ಥಾನದ ಊರುಗಳನ್ನು ಸಂದರ್ಶಿಸಲು ಆಗಾಗ ಬರುತ್ತಿದ್ದರು. "ಈ ಸ್ಥಿತಿಯಲ್ಲಿ ಗೋವೆಯಲ್ಲಿದ್ದ ಒಬ್ಬ ಮಿಷನರಿಯು ಕ್ರಿ.ಶ. 1649ರಲ್ಲಿ ಮೈಸೂರು ನಗರಕ್ಕೆ ಬಂದು ಕಂಠೀರವ ನರಸರಾಜರ ಉದಾರ ಅನುಮತಿಯಿಂದ ಅಲ್ಲಿ ನೆಲೆಯೂರಿದನು."[೧]

ಕ್ರಿ.ಶ. 1809 ರಲ್ಲಿ ಮೊದಲ ಬಾರಿಗೆ ಪ್ರೊಟೆಸ್ಟೆಂಟ್ ಮಿಷನರಿಯ ಆಗಮನವಾಯಿತು.

ಈ ಮಿಷನರಿಗಳ ಮೂಲಕ ಆಗಮನದ ಹಿಂದೆ ಬಹು ಸ್ಪಷ್ಟವಾಗಿ ಕಾಣುವಂತೆ ಅವರು ಮತ ಪ್ರಸಾರದ ಉದ್ದೇಶದಿಂದಲೇ ಬಂದವರು. ಹೀಗೆ ಬಂದವರು ನಮ್ಮ ನಾಡಿನಲ್ಲಿ ಶೈಕ್ಷಣಿಕ, ಸಾಹಿತ್ಯಿಕ ಚಟುವಟಿಕೆಗಳಲ್ಲಿ ನಿರತರಾಗಿದ್ದರು.

### ೪.೨.೧ ಲಂಡನ್ ಮಿಶನ್ ಸಂಸ್ಥೆ :

ಲಂಡನ್ ಮಿಶನ್ ಸಂಸ್ಥೆಯೇ ಕರ್ನಾಟಕಕ್ಕೆ ಬಂದ ಆದ್ಯ ಪ್ರೊಟೆಸ್ಟೆಂಟ್ ಮಿಶನ್ ಸಂಸ್ಥೆ. ಜಾನ್ ಹ್ಯಾಂಡ್ಸ್ ಎಂಬಾತನೇ ಮೊದಲ ಪ್ರೊಟೆಸ್ಟೆಂಟ್ ಮಿಶನರಿ. ಹೀಗೆ ಬಂದ ಜಾನ್ ಹ್ಯಾಂಡ್ಸ್ ಕನ್ನಡವನ್ನು ತಕ್ಕ ಮಟ್ಟಿಗೆ ರೂಢಿಸಿಕೊಂಡು ಬೈಬಲ್‌ನ ಬಹು ಭಾಗವನ್ನು ಕನ್ನಡಕ್ಕೆ ಅನುವಾದಿಸಿದ. ಮಾತ್ರವಲ್ಲದೆ ಬೈಬಲ್‌ನ ಹೊಸ ಒಡಂಬಡಿಕೆಯನ್ನೂ ಅನುವಾದಿಸಿ, ಅನೇಕ ಮತ ಪ್ರಸಾರದ ಪುಸ್ತಕಗಳನ್ನು 1820ರ ಹೊತ್ತಿಗೆ ಮದ್ರಾಸಿನಿಂದ ಮುದ್ರಿಸಿ ತರಿಸಿದ. 1818ರ ಹೊತ್ತಿಗೆ ಬಳ್ಳಾರಿಯಲ್ಲಿ ಒಂದು ಬೈಬಲ್ ಸಂಘವನ್ನು ಸ್ಥಾಪಿಸಿ ಪುಸ್ತಕ ಪ್ರಕಟನೆಯ ಹಾದಿಯನ್ನು ಮಾಡಿಕೊಂಡರು. ಹ್ಯಾಂಡ್ಸ್‌ನ ಹೊಸ ಒಡಂಬಡಿಕೆಯ ಮುದ್ರಣದ ಜೊತೆಗೆ ಹಳೆಯ ಒಡಂಬಡಿಕೆಯ ಅನುವಾದವನ್ನೂ ರೀವ್ ಮೊದಲಾದವರ ಸಹಾಯದಿಂದ ಮಾಡಿದ್ದನು. ಸಮಗ್ರ ಬೈಬಲನ್ನು ಕನ್ನಡದಲ್ಲಿ ಮೊದಲ ಬಾರಿಗೆ ಹೊರತಂದದ್ದರ ಶ್ರೇಯಸ್ಸು ಹ್ಯಾಂಡ್ಸ್‌ನದ್ದೆ. ಹ್ಯಾಂಡ್ಸ್‌ನ ಕಾರ್ಯ ಶ್ರದ್ಧೆಯನ್ನು ಇಲ್ಲಿ ಗಮನಿಸಬೇಕು. ಮುಖ್ಯವಾಗಿ ಮೊದಲು ಬಂದವನಾಗಿ ಇಲ್ಲಿ ನೆಲೆನಿಂತು ಇಲ್ಲಿನ ನೆಲವನ್ನು ತನ್ನ ನಂತರ ಬಂದ ಮಿಶನರಿಗಳಿಗೆ ಹದವಾಗಿಸಿದವನು ಈತ. ಆತನ ಅನುವಾದಗಳಲ್ಲಿ ಭಾಷೆಯ ಗ್ರಹಣದಲ್ಲಿ ಈತ ತಜ್ಞನಲ್ಲವೆಂಬುದು ಕಂಡರೂ ಕರ್ನಾಟಕದಲ್ಲಿ ಪ್ರೊಟೆಸ್ಟೆಂಟ್ ಮತಕಾರ್ಯದ ಒಂದು ಭದ್ರ ಬುನಾದಿಯನ್ನು ಹಾಕಿ ಕನ್ನಡದಲ್ಲಿ ಮುದ್ರಣದ ಕಾರ್ಯವನ್ನು ಮೊದಲು ಆರಂಭಿಸಿದನು. ಮುಂದೆ ಇದೇ ಮಿಶನ್ ಸಂಸ್ಥೆಯಲ್ಲಿ ವಿಲಿಯಮ್ ರೀವ್ ಎಂಬವನು ಬಂದನು. ಕ್ರೈಸ್ತ ಮತೀಯ ಗ್ರಂಥಗಳ ಅನುವಾದಕ್ಕೆ ಬಹಳ ಮುಖ್ಯವಾಗಿ ಬೇಕಾದ ಇಂಗ್ಲಿಷ್ – ಕನ್ನಡ ಶಬ್ದಕೋಶವನ್ನು ರಚಿಸಿದನು. ಬಳಕೆಯ ಮತ್ತು ಸಾಮಾನ್ಯ ಇಂಗ್ಲಿಷ್ ಪದಗಳಿಗೆ, ಕನ್ನಡ ಪದಗಳನ್ನು ಸಮಾನಾರ್ಥಕಗಳನ್ನು ತಿಳಿದು ಶಬ್ದಕೋಶವನ್ನು ರಚಿಸಿದನು. ಇದೇ ಸಮಯದಲ್ಲಿ ಭಾರತದಲ್ಲಿ ಆಡಳಿತದ ಬೇರೆ ಬೇರೆ ಅಂಗಗಳನ್ನು ನಿರ್ವಹಿಸುತ್ತಿದ್ದ ಬ್ರಿಟೀಷ್ ಆಡಳಿತಗಾರರಿಗೂ ಇಂತಹದೊಂದು ಕೋಶವು ಅಗತ್ಯವಾದುದರಿಂದ ಕಂಪೆನಿ ಸರಕಾರ ಈ ಕೋಶವನ್ನು ಮುದ್ರಿಸಿತು. ಅಪರಿಚಿತವಾದ ಒಂದು ಭಾಷೆಯ ನಾಡಿಗೆ ಬಂದು ಹೊಸದಾಗಿ ತನ್ನ ಕಾಲದಲ್ಲಿ ಇಲ್ಲದೆ ಇರುವಂಥ ಒಂದು ಶಬ್ದಕೋಶವನ್ನು ರಚಿಸಿ ಒಂದು ಮಾದರಿಯನ್ನು ನಿರ್ಮಾಣ ಮಾಡುವ ಜವಾಬ್ದಾರಿ ಆತನ ಮೇಲೆ ಇತ್ತು. ಕೇವಲ ಶಬ್ದಕೋಶವನ್ನು ಮಾತ್ರ ರಚಿಸದೆ. ಶಬ್ದಕೋಶದ ಮೂಲಕ ಇಡೀ ಭಾಷಿಕ ಜನಜೀವನದ ಕುರಿತು ಕೂಡ ಪರಿಚಯ ಮಾಡಿಕೊಡುವ ಉದ್ದೇಶವನ್ನು ಹೊಂದಿದ್ದ ಈ ಶಬ್ದಕೋಶ ವಿಶಿಷ್ಟವಾದದ್ದು. ಮುಂದಿನ ಕೋಶ ರಚನಾಕಾರರಿಗೆ ರೀವ್ ಒಂದು ತಳಪಾಯವನ್ನು ಒದಗಿಸಿದ್ದಾರೆ. ಈತನ ನಂತರದಲ್ಲಿ ಗಮನಾರ್ಹವಾದ ವ್ಯಕ್ತಿ ಜಾನ್ ರೀಡ್ ಎಂಬವನು. ಕನ್ನಡದ ಬಗೆಗೆ ವಿಶೇಷವಾದ ಆಸಕ್ತಿಯನ್ನು ಹೊಂದಿದ್ದ ರೀಡ್

ಇಂಗ್ಲೆಂಡ್‌ನಲ್ಲಿರುವಾಗಲೇ ಹ್ಯಾಂಡ್ಸ್‌ನ ಮುಖಾಂತರ ಕನ್ನಡವನ್ನು ಕಲಿಯತೊಡಗಿದನು. ಕನ್ನಡ – ತೆಲುಗು– ಇಂಗ್ಲೀಷ್ ಭಾಷೆಗಳ ತಜ್ಞತೆ ಈತನಿಗೆ ಇದ್ದಿತು. ಈತನ ಬಗ್ಗೆ ಡಾ। ಶ್ರೀನಿವಾಸ ಹಾವನೂರ ಹೀಗೆ ಹೇಳುತ್ತಾರೆ. "ಈತನ ಕೃತಿಯಲ್ಲಿ ಸಾಮಾನ್ಯ ವಿಷಯ, ವ್ಯಾಕರಣ, ಗಣಿತ, ಜ್ಯೋತಿಷ, ಭೂಗೋಳ ಮಂತಾದ ವಿಷಯಗಳ ಮೇಲಿನ ಪಾಠಗಳಿವೆ. ಪಾಠದ ಶುರುವಿಗೆ ಕೆಲವು ಇಂಗ್ಲೀಷ್ ಶಬ್ದಗಳು ಹಾಗೂ ಅವುಗಳ ಕನ್ನಡ ಅರ್ಥವನ್ನು ಕೊಟ್ಟು, ಅನಂತರ ಮೇಲಣ ವಿಷಯಗಳಿಗೆ ಸಂಬಂಧಿಸಿದ ವಾಕ್ಯ ಸಮುದಾಯವನ್ನು ಭಾಷಾಂತರದೊಂದಿಗೆ ಕೊಡಲಾಗಿದೆ. ಆದರೆ ಉದಾಹರಣೆಗಳನ್ನು ಕೊಡುವಾಗ ಈ ಪುಸ್ತಕದುದ್ದಕ್ಕೂ ಕ್ರೈಸ್ತ ಪ್ರಸಾರ ದೃಷ್ಟಿ ಎದ್ದು ಕಾಣುತ್ತದೆ. ಜೊತೆಗೆ ಹಿಂದೂ ಆಚಾರ–ವಿಚಾರಗಳ ಬಗ್ಗೆ ಅಸಹಿಷ್ಣುತೆಯ ಅಂಶಗಳೂ ಹಣಿಕಿಕ್ಕಿವೆ. ವ್ಯಾಕರಣ ವಿಭಾಗದ 19ನೇ ಪಾಠದಲ್ಲಿ ವಿಗ್ರಹ ಪೂಜೆಯನ್ನು ಖಂಡಿಸುತ್ತಾ, ಕೊನೆಯಲ್ಲಿ 'ಏಸು ಕ್ರಿಸ್ತನಲ್ಲದೆ ಬೇರೆ ರಕ್ಷಕನ್ಯಾವನು ಇಲ್ಲ, ಕ್ರಿಸ್ತ ಧರ್ಮವಲ್ಲದೆ ಬೇರೆ ನಿಜವಾದ ಧರ್ಮವು ಯಾವುದು ಇಲ್ಲ"[2] ಎಂದು ಹೇಳುತ್ತಾನೆ ಎನ್ನುತ್ತಾರೆ. ಕಾಲಿನ್ ಕ್ಯಾಂಬೆಲ್ ಎನ್ನುವ ಲಂಡನ್ ಮಿಶನರಿ ಕನ್ನಡ ಶಿಕ್ಷಣ, ಸಾಹಿತ್ಯ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿದ್ದವನು. 1835ರಲ್ಲಿ ಮೈಸೂರಿನಲ್ಲಿ ಒಂದು ಮಿಶನ್ ಪ್ರಾಥಮಿಕ ಶಾಲೆಯನ್ನು ಆರಂಭಿಸಿದನು. ಅಲ್ಲಿಯ ಮಕ್ಕಳಿಗೆ 'ಕನ್ನಡ ವ್ಯಾಕರಣ ಸಾರ'ವನ್ನು ರಚಿಸಿದನು. ಈ ವಿಷಯದಲ್ಲಿ ಮೊಟ್ಟ ಮೊದಲಿನ ಪಠ್ಯ ಪುಸ್ತಕವಿದು. ಲಂಡನ್ ಮಿಶನ್ ಸಂಸ್ಥೆಯವರಲ್ಲೆಲ್ಲ ಬಹಳ ಮುಖ್ಯವಾದವನು ಬಿ. ಎಚ್. ರೈಸ್. ನಾಲ್ಕು ದಶಕಗಳ ಕಾಲ ಕನ್ನಡದ ನೆಲದಲ್ಲಿ ತನ್ನ ಕಾರ್ಯದಲ್ಲಿ ತೊಡಗಿಕೊಂಡಿದ್ದನು. ಕರ್ನಾಟಕದಲ್ಲಿ ಈವರೆಗಿನ ಮಿಶನರಿ ಕಾರ್ಯದ ಕೊರತೆಗಳು ಏನು ಎಂಬುದನ್ನು ಅರಿತುಕೊಂಡು, ಮುಂದೆ ಕ್ರೈಸ್ತ ಶಿಕ್ಷಣವನ್ನು ಎಳೆಯರಲ್ಲಿ ರೂಢಿಸಿ ಜ್ಞಾನವಂತರನ್ನಾಗಿ ಮಾಡಬೇಕೆಂಬ ನೆಲೆಯಿಂದ ಕಾರ್ಯಪ್ರವೃತ್ತನಾಗಿದ್ದನು. ಯೂರೋಪಿಯನ್ ಭಾಷೆಗಳಿಂದ ಈವರೆಗೆ ಅನುವಾದಗೊಂಡ ಮತೀಯ ಪುಸ್ತಕಗಳ ಪ್ರಯೋಜನ ಏನು ಎಂಬುದನ್ನು ಪ್ರಶ್ನಿಸಿದ ಮೊದಲಿಗನು ಇವನು. ದೇಶ ಭಾಷೆಯಲ್ಲಿಯ ಮತ ಪುಸ್ತಕಗಳು ದೇಶೀಯರ ವಿಚಾರ ಪ್ರವೃತ್ತಿಗೆ ಅನುಗುಣವಾಗಿರಬೇಕು. ಹಾಗಾದಾಗ ಮಾತ್ರ ಜನರ ಮನಸ್ಸನ್ನು ಪರಿವರ್ತಿಸಲು ಅವು ಸಮರ್ಥವಾಗಬಲ್ಲದು ಎಂದು ಹೇಳುತ್ತಿದ್ದನು.

ಡಾ। ಹಾವನೂರ ಉಲ್ಲೇಖಿಸಿದ 'Proceedings South India Mission Conference -1858' ಎಂಬ ಕೃತಿಯಿಂದ ಉಲ್ಲೇಖಿಸಿದ ಈ ಮಾತು ಬಹಳ ಮುಖ್ಯವಾದದ್ದು. "ದೇಶಿಯರಲ್ಲಿ ಜಿಜ್ಞಾಸು ಭಾವ ಬೆಳೆಯುತ್ತಲಿದೆ. ಅದನ್ನು ತಣಿಸುವಂತಹ ಪುಸ್ತಕಗಳನ್ನು ಹೊರಡಿಸಬೇಕು. ಆ ದಿಶೆಯಲ್ಲಿ ದೇಶಿಯ ಮತ ಪ್ರಸಾರಕರು ಉಪಯುಕ್ತ ಸಾಹಿತ್ಯವನ್ನು ರಚಿಸಬಲ್ಲವರಾದ್ದರಿಂದ ಅವರಿಗೆ ಹೆಚ್ಚು ಅವಕಾಶವನ್ನು ಕಲ್ಪಿಸಿಕೊಡಬೇಕು.

ವಿಸ್ತಾರವಾದ ಬೈಬಲ್‌ನ ಸಾರವನ್ನು ಒಳಗೊಂಡ ಮತ್ತು ಅದರ ಸತ್ಯಗಳನ್ನು ನೇರವಾಗಿ ಎತ್ತಿ ತೋರಿಸುವ ಅಧಿಕೃತ ಸಂಕ್ಷಿಪ್ತ ಕೃತಿಯೊಂದು ದೇಶಿಯ ಭಾಷೆಯಲ್ಲಿ ಸಿದ್ಧವಾಗಬೇಕು. ಹಿಂದೂ ಧರ್ಮದೊಂದಿಗೆ ಹೋಲಿಸಿ ಕ್ರೈಸ್ತ ತತ್ವಗಳನ್ನು ಪ್ರಕಾಶಿಸಬೇಕು. ಒಂದು ದೇಶ ಭಾಷೆಯಿಂದ ಇನ್ನೊಂದಕ್ಕೆ ಉತ್ತಮ ಕೃತಿಗಳ ಅನುವಾದ ಕಾರ್ಯವು ನಡೆಯಬೇಕಾಗಿದೆ. ಕವಿತೆಯು ದೇಶಿಯರ ನೆಚ್ಚಿನ ಸಾಹಿತ್ಯ ಪ್ರಕಾರವಾಗಿದ್ದು ಅದರ ಮೂಲಕ ನಾವು ಸ್ವಮತ ತತ್ವಗಳನ್ನು ಹರಡಬಹುದಲ್ಲವೆ? ಅಲ್ಲದೆ ಕ್ರಿಶ್ಚಿಯನ್ ತತ್ವದ ಪ್ರಸಾರಕ್ಕಾಗಿ, ಸೂಕ್ತವಾದ ಪತ್ರಿಕೆಯನ್ನು ಹೊರಡಿಸಬೇಕು"[೩] ಎಂದು ರೈಸ್‌ರವರು ಹೇಳಿದ್ದಾರೆ. ಬಿ.ಎಚ್ ರೈಸ್‌ರವರ ಈ ತಿಳುವಳಿಕೆಯನ್ನು ಬಹುಶಃ ವಿಸ್ತರಿಸಿದವರು ಅವರ ಮಕ್ಕಳಾದ ಲೂಯಿ ರೈಸ್ ಮತ್ತು ಎಡ್ವರ್ಡ್ ಪಿ. ರೈಸ್ ಇವರಿಬ್ಬರ ಕೆಲಸವು ಬಹುಶಃ ಇದೇ ಮಾದರಿಯನ್ನು ಅನುಸರಿಸಿದೆ. ಬಿ.ಎಲ್. ರೈಸ್ ಶಾಸನ ಶಾಸ್ತ್ರದಲ್ಲೂ, ಇ.ಪಿ. ರೈಸ್ ಕನ್ನಡ ಸಾಹಿತ್ಯ ಚರಿತ್ರೆಯ ಕ್ಷೇತ್ರದಲ್ಲೂ ವಿಶೇಷವಾದ ಕೆಲಸವನ್ನು ಮಾಡಿದರು.

ಇ.ಪಿ. ರೈಸ್ 1915ರಲ್ಲಿ 'A History of Kanerese Literature' ಎಂಬ ಕೃತಿಯನ್ನು ಬರೆದು ಪ್ರಕಟಿಸಿದರು. ಇದು ಕನ್ನಡ ಸಾಹಿತ್ಯದ ಕುರಿತು ಇಂಗ್ಲಿಷ್ ಭಾಷೆಯಲ್ಲಿ ಬಂದ ಸಾಹಿತ್ಯ ಚರಿತ್ರೆ. ಈ ಅಧ್ಯಯನವು ಇ.ಪಿ. ರೈಸ್‌ರ ಕೆಲಸದ ಬಗೆಗೆ ವಿಸ್ತಾರವಾದ ಚರ್ಚೆಯನ್ನು ಮುಂದಿನ ಭಾಗದಲ್ಲಿ ಮಾಡುತ್ತದೆ.

### ೪.೨.೨ ಬಾಸೆಲ್ ಮಿಶನ್ ಸಂಸ್ಥೆ :

ಕನ್ನಡದ ಸಾಹಿತ್ಯ ರಂಗದಲ್ಲಿ ವಿಶೇಷವಾದ ಕಾರ್ಯವನ್ನು ನಿರ್ವಹಿಸಿದವರಲ್ಲಿ ಬಾಸೆಲ್ ಮಿಷನರಿಗಳು ಬಹು ಮುಖ್ಯರು. 1834ರಿಂದ ಸ್ಯಾಮುವೆಲ್ ಹೆಬಿಕ್‌ರವರಿಂದ ಆರಂಭಗೊಂಡ ಈ ಮಿಶನರಿ ಕಾರ್ಯ ಮುಂದೆ ಸೇವೆ ಮತ್ತು ಧರ್ಮ ಪ್ರಚಾರದ ಕಾರ್ಯಕ್ಕೆ ಅನುಕೂಲವಾಗುವಂತೆ ದೇಶೀಯ ಭಾಷೆಗಳನ್ನು ಕಲಿಯತೊಡಗಿದರು. ತಮಗಿಂತ ಮೊದಲೇ ಕರ್ನಾಟಕದಲ್ಲಿ ಕಾರ್ಯವನ್ನು ಪ್ರಾರಂಭಿಸಿದ್ದ ಲಂಡನ್ ಮಿಶನರಿ ಸಂಸ್ಥೆಯ ಜಾನ್ ಹ್ಯಾಂಡ್ಸ್ ಜೊತೆ ಹೆಬಿಕ್ ಸ್ಯಾಮುವೆಲ್ ನಿಕಟ ಸಂಪರ್ಕವನ್ನು ಹೊಂದಿದ್ದರು. ಹರ್ಮನ್ ಮೊಗ್ಲಿಂಗ್ ಎಂಬ ಮಿಶನರಿ ಧರ್ಮ ಪ್ರಸಾರ, ಸಾಹಿತ್ಯ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ವಿಶೇಷವಾದ ಸೇವೆಯನ್ನು ಸಲ್ಲಿಸಿದನು. ಧಾರವಾಡ, ಮಂಗಳೂರು, ಕೊಡಗಿನಲ್ಲಿ ವಿಶೇಷವಾಗಿ ಕೆಲಸವನ್ನು ನಿರ್ವಹಿಸಿದನು. ಕನ್ನಡದ ಪತ್ರಿಕಾ ಪ್ರಪಂಚಕ್ಕೆ 'ಮಂಗಳೂರು ಸಮಾಚಾರ', 'ಕನ್ನಡ ಸಮಾಚಾರ'ಗಳನ್ನು ಸಂಪಾದಿಸಿ ಪ್ರಕಟಿಸಿದನು. ಗಾದೆಗಳ ಸಂಗ್ರಹ, ಬಿಬ್ಲಿಯಾಥಿಕಾ ಕರ್ನಾಟಿಕಾ' ಮೂಲಕ ಜೈಮಿನಿ ಭಾರತ, ತೊರವೆ ರಾಮಾಯಣ, ದಾಸರ ಪದಗಳನ್ನು ಸಂಕಲಿಸಿದನು. ಹಳೆಗನ್ನಡದ ಕೃತಿಗಳನ್ನು ಮೊದಲು ಸಂಪಾದಿಸಿ ಕೆಲವನ್ನು ಜರ್ಮನ್

ಭಾಷೆಗೂ ಅನುವಾದಿಸಿದರು. ಕನ್ನಡ ಸಾಹಿತ್ಯದ ಓದಿನ ಸಂದರ್ಭದಲ್ಲಿ ಹೊಸ ಬಗೆಯ ದಿಕ್ಕನ್ನು ತಂದು ಕೊಟ್ಟವನು ಮೊಗ್ಲಿಂಗ್. ಜಿ.ಎಚ್ ವೈಗ್ಲೆ ಎಂಬ ಮಿಶನರಿ ZDMG ಎಂಬ ಪತ್ರಿಕೆಯಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಕುರಿತು ಮೊದಲ ಬಾರಿಗೆ ಒಂದು ವಿವರವಾದ ಲೇಖನವನ್ನು ಬರೆದರು. ಕಿಟ್ಟೆಲ್ ತನ್ನ ಪ್ರಬಂಧವನ್ನು ಬರೆಯುವ ಸುಮಾರು 30 ವರ್ಷಗಳ ಪೂರ್ವದಲ್ಲಿಯೇ ವೈಗ್ಲೆ ಈ ಆಸಕ್ತಿಯನ್ನು ತೋರಿದ್ದು ಗಮನಾರ್ಹವಾದ ಸಂಗತಿಯಾಗಿದೆ. ಬಾಸೆಲ್ ಮಿಶನ್‌ನಲ್ಲಿ ಬಹು ಪ್ರಮುಖವಾಗಿ ಕನ್ನಡದ ಕಾರ್ಯವನ್ನು ನಿರ್ವಹಿಸಿದವನು ಫರ್ಡಿನಾಂಡ್ ಕಿಟ್ಟೆಲ್. 1872 ರಲ್ಲಿ 'ಶಬ್ದಮಣಿದರ್ಪಣ'ವನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಹೊರ ತಂದರು. ವಿವಿದ ಹಸ್ತ ಪ್ರತಿಗಳ ಕೂಲಂಕುಷ ಪರಿಶೀಲನೆ, ಪಾಠಾಂತರಗಳ ಅಡಿಟಿಪ್ಪಣಿ, ಪಠ್ಯಭಾಗದ ಸ್ಪಷ್ಟ ರೂಪದ ಸವಿವರ ಪೀಠಿಕೆಯನ್ನು ನೀಡಿ ಗ್ರಂಥ ಸಂಪಾದನೆಯ ಮಾರ್ಗವನ್ನು ಕಿಟ್ಟೆಲ್ ಕನ್ನಡಿಗರಿಗೆ ತೋರಿಸಿಕೊಟ್ಟರು. 1875ರಲ್ಲಿ 'ನಾಗವರ್ಮನ ಛಂದೋಂಬುಧಿ'ಯನ್ನು ಸಂಪಾದಿಸಿದರು. ಮತ್ತು ಬಹುಮುಖ್ಯ ವಿಷಯವೆಂದರೆ 'Essay on Canerese Leterature' ಎಂಬ ದೀರ್ಘ ಪ್ರಬಂಧವನ್ನು ಇಲ್ಲಿ ನೀಡಿದರು. ಕಿಟ್ಟೆಲ್‌ನ ಇನ್ನೊಂದು ಬಹುದೊಡ್ಡ ಕೊಡುಗೆ ಕಿಟ್ಟೆಲ್ ಶಬ್ದಕೋಶ ಎಂದೇ ಜನಪ್ರಿಯವಾಗಿರುವ ಕನ್ನಡ – ಇಂಗ್ಲಿಷ್ ಶಬ್ದಕೋಶ. ಆಗಾಗಲೇ ಮಲೆಯಾಳಿ ಭಾಷೆಯಲ್ಲಿ ಶಬ್ದಕೋಶವನ್ನು ರಚಿಸಿದ್ದ ಗುಂಡರ್ಟನ ಶಬ್ದಕೋಶದ ಮಾದರಿ ಇತ್ತು. ಇದರಲ್ಲಿ ಪದಪ್ರಯೋಗ, ವ್ಯುತ್ಪತ್ತಿ, ದ್ರಾವಿಡ ಸಮಾನ ಪದ ಸೂಚನೆಯನ್ನು ಕಿಟ್ಟೆಲ್ ನಿರ್ಣಯಿಸಿದರು. 'ಇಷ್ಟು ಖಚಿತವೂ ಶಾಸ್ತ್ರೀಯವೂ ನಿಯಮಬದ್ಧವೂ ಆದ ನಿಘಂಟು ಭಾರತದ ಯಾವ ದೇಶ ಭಾಷೆಗಳಿಗೂ ಇಲ್ಲ' ಎಂದು ಹುಲ್ಷ್ ಎಂಬವರು ತಿಳಿಸುತ್ತಾರೆ. ಈ ಕೋಶದ ವಿಮರ್ಶೆಯನ್ನು ಮಾಡುತ್ತಾ ಫ್ಲೀಟ್ ಎಂಬವನು "We now have available for the study of Kanarese in its ancient and mediaeval forms a dictionary of the most exhaustive and useful kind. We still require a complete and critical grammar in English for the same periods and also with the exceptional forms which some time are met with in our epigraphic records. It is to be hoped that Mr. Kittel may find himself able now to take such a grammer in hand and supply the want that has so long been felt in this

direction"[೬] ಎಂದು ಹೇಳುತ್ತಾನೆ. ಅವರ ಸಾಹಿತ್ಯ ಚರಿತ್ರೆಯ ಕುರಿತ ಕಾರ್ಯವನ್ನು ಈ ಅಧ್ಯಯನದಲ್ಲಿ ಪರಿಶೀಲಿಸಲಾಗುವುದು.

**೪.೩ ಸಾಹಿತ್ಯ ಚರಿತ್ರೆಯ ತಾತ್ವಿಕತೆ:**

ಕಿಟ್ಟೆಲ್‌ರ ಸಾಹಿತ್ಯ ಚರಿತ್ರೆಯ ಬರವಣಿಗೆಯನ್ನು ಕನ್ನಡ ಸಾಹಿತ್ಯ ಚರಿತ್ರೆಯ ಗಮನಾರ್ಹ ಮಾದರಿಯೆಂದು ಗುರುತಿಸಲಾಗುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಗೆ ಒಂದು ರೂಪವನ್ನು, ಚೌಕಟ್ಟನ್ನು ಕಟ್ಟುವ ಪ್ರಯತ್ನ ಇಲ್ಲಿ ಮೊದಲ ಬಾರಿಗೆ ನಡೆಯಿತು. ಮತ ಪ್ರಸಾರದ ಹಿನ್ನೆಲೆಯಿಂದ ಸ್ಥಳೀಯ ಭಾಷೆಯನ್ನು ಕಲಿಯಬೇಕಾದ ಸಂದರ್ಭಗಳು ಬಂದಿದ್ದರೂ, ಅದನ್ನು ಮೀರಿ ಭಾಷೆಯ ಮೇಲಿನ ಪ್ರೀತಿಯಿಂದ ಈ ಕಾರ್ಯವನ್ನು ಬೆಳೆಸಿದರು. ಹಾಗೆಯೇ ಇ.ಪಿ. ರೈಸರು ಕೂಡ ಒಂದು ಸಾಹಿತ್ಯ ಚರಿತ್ರೆಯನ್ನು ಇಂಗ್ಲೀಷ್ ಭಾಷೆಯಲ್ಲಿ ರಚಿಸಿದರು. ಕನ್ನಡದಲ್ಲಿ ಮುಂದೆ ಸಾಹಿತ್ಯ ಚರಿತ್ರೆಯ ವಿಷಯಕ್ಕೆ ಸಂಬಂಧಿಸಿದಂತೆ ಯಾವ ವಿಶೇಷ ಪ್ರಯತ್ನಗಳು ನಡೆದಿದ್ದರೂ ಅದಕ್ಕೆ ಆಧಾರ ಈ ಇಬ್ಬರ ಕೆಲಸಗಳು. ಇವರ ಅಭಿಪ್ರಾಯದ ಮೇಲೆ ಮುಂದೆ ಸಾಹಿತ್ಯ ಚರಿತ್ರೆಯ ಒಟ್ಟು ಕಟ್ಟಡ ಎದ್ದು ನಿಂತಿತು.

ಇವರ ಬರವಣಿಗೆಗಳಲ್ಲಿ ಸಾಹಿತ್ಯ ಚರಿತ್ರೆಯನ್ನು ಗ್ರಹಿಸುವ ತಾತ್ವಿಕ ನೆಲೆಗಳು ಇಲ್ಲದೇ ಹೋದರೂ, ಕನ್ನಡ ಸಾಹಿತ್ಯದ ಒಟ್ಟು ಬೆಳವಣಿಗೆಯ ಹಂತಗಳನ್ನು, ಬೆಳವಣಿಗೆಯ ಕ್ರಮವನ್ನು ಗುರುತಿಸುವಲ್ಲಿ ಸಫಲವಾಯಿತು. ಮುಂದೆ ಇದು ಭಿನ್ನ ತಾತ್ವಿಕತೆಗಳ ಆಧಾರದಲ್ಲಿ ಸಾಹಿತ್ಯ ಚರಿತ್ರೆಯಾಗಿ ರೂಪು ತಳೆಯಿತು. ಎಫ್. ಕಿಟ್ಟೆಲ್ ಮತ್ತು ಇ.ಪಿ. ರೈಸರ ಬರವಣಿಗೆಯಲ್ಲಿನ ತಾತ್ವಿಕತೆಯನ್ನು ಗುರುತಿಸುವ ಪ್ರಯತ್ನ ಈ ಅಧ್ಯಯನ.

**೪.೩.೧ ಕಿಟ್ಟೆಲ್‌ರ ಸಾಹಿತ್ಯ ಚರಿತ್ರೆಯ ತಾತ್ವಿಕತೆ:**

ಮಿಷನರಿಯಾಗಿ ಬಂದು ಕನ್ನಡ ಭಾಷೆ-ಸಾಹಿತ್ಯದ ಕೆಲಸವನ್ನು ಮಾಡಿದ ಶ್ರೇಷ್ಠ ವಿದ್ವಾಂಸರಲ್ಲಿ ಕಿಟ್ಟೆಲ್ ಮುಖ್ಯನು. ಕಿಟ್ಟೆಲ್‌ಗಿಂತ ಪೂರ್ವದಲ್ಲಿ ಈ ಕೆಲಸಗಳು ಹೇಳಿಕೊಳ್ಳುವ ಮಟ್ಟಿಗೆ ನಡೆದಿರಲಿಲ್ಲ. ಕನ್ನಡ ಸಾಹಿತ್ಯವನ್ನು ಓದಿದ ನಂತರ ಹೀಗೆ ಇರುವ ಸಾಹಿತ್ಯವನ್ನು ಒಂದು ಚಾರಿತ್ರಿಕ ಬೆಳವಣಿಗೆಯ ಚೌಕಟ್ಟಿನಲ್ಲಿ ಕಟ್ಟುವ ಪ್ರಯತ್ನವನ್ನು ಮೊದಲು ಮಾಡಿದವರು ಮಿಷನರಿಗಳು. ಅದಕ್ಕಿಂತ ಹಿಂದೆ ನಮ್ಮಲ್ಲಿ ಸಾಹಿತ್ಯದ ಓದು-ಚಿಂತನೆ-ಅಧ್ಯಯನಗಳು ಇದ್ದರೂ ಈ ಮಾದರಿಯಲ್ಲಿ ಅಂದರೆ, ಇಡೀ ಸಾಹಿತ್ಯವನ್ನು ಒಂದು ಕಾಲಾನುಕ್ರಮಣಿಕೆಯ ಮಾದರಿಯಲ್ಲಿ ಕಟ್ಟುವ ಪ್ರಯತ್ನಗಳು ನಡೆದಿರಲಿಲ್ಲ. ಪೈಗ್ಲೆ ಈ ಪ್ರಯತ್ನವನ್ನು ಮೊದಲು ಮಾಡಿದ. ತನ್ನ ಕಾಲಕ್ಕೆ ಉಪಲಬ್ಧವಿದ್ದು, ತನ್ನ ಗಮನಕ್ಕೆ ಬಂದಿರುವ ಕೃತಿಗಳ ಆಧಾರದಿಂದ ಸಾಹಿತ್ಯ ಚರಿತ್ರೆಯ ಪ್ರಸ್ತಾಪವನ್ನು ಮಾಡುತ್ತಾರೆ. ಸಾಹಿತ್ಯ ಚರಿತ್ರೆ ಎಂಬ ಪರಿಕಲ್ಪನೆಯೇ ಯಾವೊಂದು ಬಗೆಯಲ್ಲೂ

ಚರ್ಚೆಯಾಗದ ಕಾಲದಲ್ಲಿ ಈ ಪ್ರಯತ್ನ ವಿಶಿಷ್ಟವಾದದ್ದು. ತುಂಬಾ ಗಂಭೀರವಾದ ಬರವಣಿಗೆ ಇದಲ್ಲವಾದರೂ ಸಾಹಿತ್ಯ ಚರಿತ್ರೆಯ ಆರಂಭದ ಪರಿಚಯಾತ್ಮಕ ಲೇಖನ ಇದೆಂದು ಒಪ್ಪಿಕೊಳ್ಳಬಹುದು. ಕಿಟ್ಟೆಲ್ ಈ ಕೆಲಸವನ್ನು ಮುಂದೆ ಬಹಳ ಗಂಭೀರವಾಗಿ ಮಾಡಿದರು. ತನ್ನ 'Old Canarese Literature' ಎಂಬ ಲೇಖನದಲ್ಲಿ ಹಳಗನ್ನಡ ಸಾಹಿತ್ಯದ ಕುರಿತು ಬರೆಯುತ್ತಾರೆ.

ಕಿಟ್ಟೆಲ್ ಈ ಸಾಹಿತ್ಯ ಚರಿತ್ರೆಯ ಪ್ರಬಂಧವನ್ನು ಬರೆಯುವಾಗ ನಿರ್ದಿಷ್ಟವಾಗಿ ಸಾಹಿತ್ಯ ಚರಿತ್ರೆಯ ಪರಿಕಲ್ಪನೆಯನ್ನಾಗಲಿ, ಸಾಹಿತ್ಯ ಚರಿತ್ರೆಯ ಬರವಣಿಗೆಯ ಉದ್ದೇಶವನ್ನಾಗಲೀ ಎಲ್ಲೂ ಹೇಳಿಕೊಂಡಿಲ್ಲ. ಹೀಗಾಗಿ ಅವರು ಸಾಹಿತ್ಯ ಚರಿತ್ರೆಯನ್ನು ಕಟ್ಟಿದ ಮಾದರಿಯೇ ಅವರು ಸಾಹಿತ್ಯ ಚರಿತ್ರೆಯನ್ನು ಗ್ರಹಿಸಿದ ಬಗೆಯಾಗಿ ನೋಡಬೇಕಾಗಿದೆ. ಅವರ 'Old Canarese Literature' ಪ್ರಬಂಧ ಆರಂಭವಾಗುವುದು ಹೀಗೆ: "In attempting to write a survey of a number of Old Canarese works, a feeling of sadness pervades me, as I think of the great talents that have, to a large extent, been misused in the production of those works. The Canarese speaking people both Aryas and Dravidas are much gifted and when they have once become the children of light, will no doubt become the authors of works that in all respects will be equal to those which have been produced by the Christians of the West"[೫] ಎಂದು. ಅಂದರೆ ಇದು ಈವರೆಗಿನ ಸಾಹಿತ್ಯದ ಒಂದು ಸಮೀಕ್ಷೆ. ಕನ್ನಡದ ಮಟ್ಟಿಗೆ ಈ ಸಮೀಕ್ಷೆಯನ್ನೇ, ಸಾಹಿತ್ಯ ಚರಿತ್ರೆಯನ್ನಾಗಿ ಪರಿಗಣಿಸಬೇಕಾದ ಈ ವಲಯದ ಶೂನ್ಯತೆಯು ಇದೆ. ಇದಕ್ಕಿಂತ ಹೆಚ್ಚಾಗಿ ಈ ಸಮೀಕ್ಷೆಯೇ ಸಾಹಿತ್ಯ ಚರಿತ್ರೆಯ ಸಾಮಗ್ರಿ ಸೌಷ್ಠವತೆಯನ್ನು ಹೊಂದಿರುವುದು ಗಮನಾರ್ಹ. ತಾನಾಗಿಯೇ ಮೊದಲು ಒಂದು ವ್ಯಾಖ್ಯಾನವನ್ನು ನೀಡಿ ಹಾಗೆ ಚರಿತ್ರೆಯನ್ನು ಕಟ್ಟುವ ಬಗೆ ಒಂದಾದರೆ, ಇನ್ನೊಂದು ಮಾದರಿ ತಾನು ಕಟ್ಟಿದ ರೀತಿಯೇ ತನ್ನ ಗ್ರಹಿಕೆಯ ವ್ಯಾಖ್ಯಾನವಾಗಿ ನಿಲ್ಲವುದು. ಕಿಟ್ಟೆಲ್ ಈ ಎರಡನೆಯ ಬಗೆಯಲ್ಲಿ ನಿಲ್ಲುತ್ತಾರೆ.

ಕಿಟ್ಟೆಲ್ ಮೊದಲ ಬಾರಿಗೆ ಕನ್ನಡ ಸಾಹಿತ್ಯವನ್ನು ಮತೀಯ ಆಧಾರದಲ್ಲಿ ಕಾಲ ವಿಭಜನೆ ಮಾಡುತ್ತಾರೆ. Jaina Literature (ಜೈನ ಸಾಹಿತ್ಯ), Lingaita Literature (ಲಿಂಗಾಯತ ಸಾಹಿತ್ಯ), Saiva Literature (ಶೈವ ಸಾಹಿತ್ಯ), Vaishnava

Literature (ವೈಷ್ಣವ ಸಾಹಿತ್ಯ) ಎಂದು ಕಾಲವನ್ನು ವಿಭಜಿಸಿಕೊಳ್ಳುತ್ತಾರೆ. ಹೀಗೆ ಕಾಲವನ್ನು ವಿಭಜನೆ ಮಾಡುವ ಮೂಲಕ ಇಡೀ ಕನ್ನಡ ಸಾಹಿತ್ಯದ ಉಗಮದ ಮೂಲವನ್ನು ಬಹುಸ್ಪಷ್ಟವಾಗಿ ಗುರುತಿಸಲು ಇವರಿಗೆ ಸಾಧ್ಯವಾಯಿತು. ಹೀಗೆ ಗುರುತಿಸುವಾಗಲೂ ತನ್ನ ಆಳವಾದ ತಿಳುವಳಿಕೆಯಿಂದ ಬಹಳ ನಿಖರವಾಗಿ ಕೃತಿಗಳ ಮೌಲ್ಯಮಾಪನವನ್ನು ಮಾಡುತ್ತಾರೆ. ಉದಾಹರಣೆಗೆ: "Keshavas grammer is very valuable and the only complete one of the Canarese language in Canarese, that is authoritative."[೬] ಎಂಬ ಮಾತು ಕೇಶಿರಾಜನ ಶಬ್ಧಮಣಿ ದರ್ಪಣವನ್ನು ಅವರು ಅಭ್ಯಾಸ ಮಾಡಿದ ರೀತಿಯನ್ನು ಸೂಚಿಸುತ್ತದೆ. ಮತ್ತೊಂದು ಕಡೆ ಕನ್ನಡ ಸಾಹಿತ್ಯದ ರಚನೆಯ ಮೂಲವನ್ನು ಗುರುತಿಸುತ್ತಾ ಹೀಗೆ ಹೇಳುತ್ತಾರೆ: "The originators of Canarese Literature are the Jainas, who have cultivated both Sanscrit and the Vernaculars of the South. They have not only written from sectarian motives but also from a love for science and have reproduced several Sanscrit scientific works in Canarese"[೭] ಈ ಮಾತು ಇಂದಿಗೂ ಶಕ್ತಿಯುತವಾಗಿ ನಿಂತಿದೆ.

ಕನ್ನಡದ ಕಾವ್ಯಗಳನ್ನು ಓದಿ ಗ್ರಹಿಸುವಾಗ ಅದನ್ನು ಲಭ್ಯವಾದ ಸಮಗ್ರ ಕಾವ್ಯ ಸಂಪತ್ತಿನ ಜೊತೆ ಹೋಲಿಸಿಕೊಂಡು ಅದರ ಸ್ಥಾನವನ್ನು ನಿಗದಿ ಪಡಿಸುತ್ತಿದ್ದ ಕ್ರಮವನ್ನು ಇಲ್ಲಿ ಕಾಣಬಹುದು. ನಾಗವರ್ಮನ ಛಂದಸ್ಸಿನ ಕುರಿತು ಹೇಳುವಾಗ "His work on prosody is the only standard work on that subject known to the Canarese. It comprises both Sanscrit and Canarese metres"[೮] ಎನ್ನುತ್ತಾನೆ.

ಲಿಂಗಾಯತ ಸಾಹಿತ್ಯದ ಕುರಿತು ಹೇಳುವಾಗ ಲಿಂಗಾಯತ ಮತ್ತು ಶೈವ ಸಾಹಿತ್ಯ ಎಂಬ ವಿಭಜನೆಯನ್ನು ಮಾಡಿಕೊಂಡು ಬೇರೆ ಬೇರೆ ಕವಿಗಳನ್ನು ಈ 2 ಗುಂಪುಗಳಲ್ಲಿ ಇಟ್ಟುಕೊಂಡು ನೋಡುತ್ತಾರೆ. ಆದರೆ ಇದು ಅವರ ಯಶಸ್ವಿಯಾದ ವಿಭಜನೆಯಾಗಿಲ್ಲ. ಲಿಂಗಾಯತ ಸಾಹಿತ್ಯದಲ್ಲಿ ಅವರಿಗೆ ಆ ಕಾಲದಲ್ಲಿ ಲಭ್ಯವಾದ ಕೃತಿಗಳು ಬಹಳ ಕಡಿಮೆ. ಮುಖ್ಯವಾಗಿ ವಚನದ ಅಗಾಧ ರಾಶಿ ಇದ್ದರೂ ಅದು ಅವರ ಗಮನಕ್ಕೆ ಈ ಹೊತ್ತಿಗೆ ಬಂದಿರಲಿಲ್ಲ. ಆದರೆ ಲಿಂಗಾಯತ ಸಾಹಿತ್ಯದ ಮೂಲ ಶಕ್ತಿಯನ್ನು ಅವರು ಗುರುತಿಸಲು ಸಾಧ್ಯವಾದದ್ದು ವಿಶೇಷ. "The Lingaitas or Lingavantas have always been very active in

expressing their ideas in poetry"[೬] ಎನ್ನುವ ಮಾತಿನಲ್ಲಿ ಸತ್ಯಾಂಶವಿದೆ. ಲಿಂಗಾಯತ ಮತ್ತು ಶೈವ ಎಂದು ವಿಭಜಿಸುವುದಕ್ಕೆ ಕಾರಣವಾದ ಸಂಗತಿ ಯಾವುದಿರಬಹುದು ಎಂಬುದು ಅಷ್ಟು ಸ್ಪಷ್ಟವಾಗಿಲ್ಲ. ಲಿಂಗ ಮತ್ತು ಶಿವ ಒಂದೇ ಪರಿಕಲ್ಪನೆ ಎಂಬುದಾಗಿ ತಿಳಿಯದೇ ಹೋಗಿರಬಹುದು.

ಮುಂದಿನ ವೈಷ್ಣವ ಸಾಹಿತ್ಯ ಎಂಬ ವಿಭಾಗದಲ್ಲಿ ಕೆಲವು ಕೃತಿಗಳನ್ನು ಗುರುತಿಸುತ್ತಾರೆ. ದಾಸರ ಪದಗಳು ಪೌರಾಣಿಕ ಕಥೆಗಳಿಂದ ಪ್ರಭಾವಿತಗೊಂಡು ಬಂದಿರುವಂತಹುದು ಎಂದು ಹೇಳುತ್ತಾರೆ. ದಾಸರ ಅನೇಕ ಪದಗಳನ್ನು ಶಾಲಾ ಪುಸ್ತಕಗಳಿಗಾಗಿ ಅನುವಾದಿಸುತ್ತಾರೆ. ಈ ಪ್ರಬಂಧವನ್ನು ಸೂಕ್ಷ್ಮವಾಗಿ ನೋಡಿದಾಗ ಒಟ್ಟು ಲಭ್ಯ ಕನ್ನಡ ಸಾಹಿತ್ಯವನ್ನು ಮತೀಯ ನೆಲೆಯಿಂದ ನಾಲ್ಕು ವಿಭಾಗದಲ್ಲಿ ವಿಭಜಿಸುತ್ತಾರೆ. ಇದು ಅವರು ಸಾಹಿತ್ಯ ಚರಿತ್ರೆಗೆ ನೀಡಿದ ಒಂದು ಕಾಲ ವಿಭಜನೆಯ ಮಾದರಿ. ಆದರೆ ಹೀಗೆ ಸಾಹಿತ್ಯ ಬೆಳವಣಿಗೆಯ ಕಾಲಘಟ್ಟವನ್ನು ವಿಭಜಿಸುವ ಮೂಲಕ ಸಾಹಿತ್ಯ ಚರಿತ್ರೆಯನ್ನು ಈ ವಿಭಜನೆಗಳ ಹೊರತಾಗಿ ಕಟ್ಟಬಹುದಾಗಿದ್ದ ಬಹುದೊಡ್ಡ ಸಾಧ್ಯತೆಯನ್ನು ಅರಿಯದೇ ಹೋದರು ಎಂದೆನಿಸುತ್ತದೆ. ಕವಿಯ ಮತನಿಷ್ಠೆಯೇ ಕಾವ್ಯದ ವಸ್ತು ಆಶಯ ಆಗಿಲ್ಲ. ಕೃತಿಗಳ ಒಳಗಿನ ಧಾರೆಯಿಂದಲೇ ಸಾಹಿತ್ಯ ಚರಿತ್ರೆಯನ್ನು ಕಟ್ಟಬಹುದಾಗಿದ್ದ ಸಾಧ್ಯತೆಗಿಂತ ಬಾಹ್ಯ ಸಂಗತಿಯ ಮೂಲಕ ಕಟ್ಟಲಾಯಿತು. ಮತ ಪ್ರಚಾರದ ಉದ್ದೇಶದಿಂದಲೇ ತನ್ನ ದೇಶವನ್ನೇ ಬಿಟ್ಟು ಇನ್ನೊಂದು ದೇಶಕ್ಕೆ ಬಂದು ಇರಬೇಕಾದ ಸ್ಥಿತಿಯೇ ಸಾಹಿತ್ಯದ ಓದನ್ನು ಮತೀಯ ನೆಲೆಯಿಂದಲೇ ನೋಡುವಂತೆ ಒತ್ತಾಯಿಸಿರಬಹುದು. ಇಲ್ಲಿ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಒಂದು ಪ್ರಯತ್ನ ಇದೆ. ಕೃತಿಗಳನ್ನು ನೋಡುವ ಪ್ರಾಮಾಣಿಕತೆಯೂ ಇದೆ. ಒಂದೇ ದೇವರನ್ನು ನಂಬುವ, ನಂಬಿಕೆ ಇರಿಸಿರುವ ನೆಲದಿಂದ ಬಂದವರಿಗೆ, ಇಲ್ಲಿನ ಒಂದೊಂದು ದೇವರೂ ಒಂದೊಂದು ಮತ ಎಂದು ಹೇಳುವ ಅನಿವಾರ್ಯತೆಯನ್ನು ಸೃಷ್ಟಿಸಿರಬಹುದಾದರೂ ಎಲ್ಲ ದೇವರುಗಳನ್ನು ಒಳಗೊಂಡ ವಿಶಾಲವಾದ ಒಂದು ಧರ್ಮ ವ್ಯವಸ್ಥೆಯ ಕಲ್ಪನೆ ಅರ್ಥವಾಗಿರದೆ ಹೋಗಿರಬಹುದು. ಮತ್ತು ಜೈನ, ಶೈವ, ವೈಷ್ಣವ, ಲಿಂಗಾಯತ ಹೀಗೆ ಒಂದಕ್ಕಿಂತ ಹೆಚ್ಚು ಮತಗಳು ಈಗಾಗಲೇ ಇಲ್ಲಿವೆ ಎಂಬುದನ್ನು ಹೇಳುತ್ತಲೇ ತಾವು ಮತ ಪ್ರಚಾರಕ್ಕೆ ಬಂದವರು ಪರಿಚಯಿಸುತ್ತಿರುವ ಹೊಸ ಮತ ಪದ್ಧತಿ ಇಲ್ಲಿಗೆ ಹೆಚ್ಚಲ್ಲ, ಈಗಾಗಲೇ ಇರುವ ಮತಗಳ ಸಾಲಿನಲ್ಲಿ ಒಂದಾಗುತ್ತದೆ ಎಂಬುದನ್ನು ತೋರಿಸಲು ಈ ಸಂಗತಿಯನ್ನೇ ಎತ್ತಿ ತೋರಿಸಿರಬಹುದು.

ಸಾಹಿತ್ಯವನ್ನು ಮತಗಳ ಆಧಾರದಲ್ಲಿ ಗುರುತಿಸುತ್ತಲೇ ಇಲ್ಲಿರುವ ಸಮಗ್ರ ಸಾಹಿತ್ಯವು ಅವುಗಳು ಮತೀಯ ಸಾಹಿತ್ಯ ಅಥವಾ Religious text ಎಂಬಂತೆ ಗ್ರಹಿಸಲಾಯಿತು. ಮತ್ತು ತಮ್ಮ ಕಾಲಕ್ಕೆ ಅಗತ್ಯವಾದ ಹೊಸ ಪಠ್ಯಗಳ ರಚನೆಯು ಹೊಸ ಮತದ ಮತ ಸಾಹಿತ್ಯಗಳಾದರೂ

ಅವುಗಳನ್ನು ಈ ಪ್ರಾಚೀನ ಸಾಹಿತ್ಯದ ಸಾಲಿಗೆ ಸೇರಿಸಿ ಉನ್ನತ ಸ್ಥಾನವನ್ನು ಪ್ರಾಪ್ತವಾಗುವಂತೆ ಮಾಡಿತು. ಮುಂದೆ ಇದು ಎಷ್ಟರ ಮಟ್ಟಿಗೆ ಸಮಾನ ಸಾಲಿನಲ್ಲಿ ನಿಂತಿತು ಎಂದರೆ ಜೈನರು, ವೀರಶೈವರು, ವೈಷ್ಣವರು, ಹರಿದಾಸರು, ಶಾಕುಂತಲದ ಅನುವಾದ, ಯಕ್ಷಗಾನ ಕವಿಗಳ ಸಾಲಿನಲ್ಲೇ ಕ್ರೈಸ್ತ ಗೀತೆಗಳು, ಬೈಬಲ್ ಅನುವಾದ ಮತಾಂತರದ ಕಥನಗಳು, ಮಿಷನರಿ ಸಾಹಿತ್ಯ ಎಂಬುದು ಜನಪ್ರಿಯತೆಗೆ ಬಂದಿತು. ಈಗ ಜೈನ ಸಾಹಿತ್ಯಕ್ಕೆ ಮತ್ತು ಕ್ರೈಸ್ತ ಗೀತೆಗಳಿಗೆ ವಸ್ತುವಿನಿಂದ ಹೊರತುಪಡಿಸಿ ಅದರ ಸಮಾನ ಸ್ಥಾನಕ್ಕೆ ಬಂದು ನಿಂತಿತು. ಒಂದಕ್ಕೊಂದು ಸಮಾನ ಸ್ಥಾನವನ್ನು ಪಡೆಯಲು ಸಾಧ್ಯವಾಯಿತು. ಇದು ಇನ್ನಷ್ಟು ಶೋಧನೆಗೆ ಒಳಪಡಬೇಕಾದ ವಿಷಯ.

ಕಿಟ್ಟೆಲ್‌ರು ಮುಂದೆ ನಾಗವರ್ಮನ ಕನ್ನಡ ಛಂದಸ್ಸು ಗ್ರಂಥದ ಮುನ್ನುಡಿಯಲ್ಲಿ ಬರೆದ "An Essay on Canarese Literature" ಎಂಬುದು ಒಂದು ವಿಸ್ತಾರವಾದ ಪ್ರಬಂಧ. ಇಡೀ ಪ್ರಬಂಧದಲ್ಲಿ ಸಾಹಿತ್ಯದ ಬೆಳವಣಿಗೆಯನ್ನು ಎರಡು ಮುಖ್ಯ ಕಾಲಘಟ್ಟಗಳಲ್ಲಿ ವಿಭಜಿಸಿಕೊಂಡಿದ್ದಾರೆ.

1. The early period from about 800 A.D to 1300 A.D.
   - i) Means in hand
   - ii) Keshava and Nagavarma
   - iii) On Keshava in particular
   - iv) On Nagavarma in particular
   - v) On Rudra Bhatta etc.
   - vi) Probable age
   - vii) An alphabetical list of early authors (40 poets)
   - viii) Some Saiva Pandits (5 poets)
   - ix) A few General remarks
2. The later period from about 1300 to 1872 A.D
   - i) The Lingayat and Saiva period: about 1300 to 1500
   - ii) The Vaishnava, Lingayath and Saiva period: From about 1500 to 1874.

   Publications of Bangalore

   Publications of Dharvada

ಈ ವಿಭಜನೆಯಲ್ಲೇ ಇಡೀ ಲೇಖನದ ಒಟ್ಟು ಸ್ವರೂಪ ಆ ಮೂಲಕ ಕನ್ನಡ ಸಾಹಿತ್ಯ ಚರಿತ್ರೆಯ ಬೆಳವಣಿಗೆಯ ಸ್ವರೂಪ ಅರಿವಾಗುತ್ತದೆ. "ಕ್ರಿ.ಶ. 800 – 19ನೇ ಶತಮಾನದವರೆಗಿನ ಕವಿ–ಕೃತಿಗಳ ವಿವೇಚನೆ ಇಲ್ಲಿ ಕಂಡು ಬರುತ್ತದೆ. ಕಿಟ್ಟೆಲ್ಲರು ಈ ಲೇಖನ ಬರೆಯುವ ಹೊತ್ತಿಗೆ ಹೆಚ್ಚು ಸಾಮಗ್ರಿ ಸಂಗ್ರಹಿಸಿದ್ದಲ್ಲದೆ ಮೂಡಬಿದಿರೆಯಲ್ಲಿರುವ ಹಸ್ತ ಪ್ರತಿಗಳನ್ನು ಬಳಸಿಕೊಂಡು ಸಾಕಷ್ಟು ವಿಷಯಗಳನ್ನು ತುಂಬಿ ಸಮಗ್ರಗೊಳಿಸಲು ಬಯಸಿದ ಕಾರಣ ಈ ಲೇಖನದಲ್ಲಿ ಹಲವಾರು ವಿಷಯಗಳು ಸೇರ್ಪಡೆಯಾಗಿದೆ"[೧೦] ಎಂದು ಎಂ.ಎಂ. ಕಲಬುರ್ಗಿಯವರು ಹೇಳುತ್ತಾರೆ.

ಕಿಟ್ಟೆಲ್‌ರ ಸಾಹಿತ್ಯ ಚರಿತ್ರೆಯ ಮುಖ್ಯ ತಾತ್ವಿಕತೆ ಲಭ್ಯವಾಗುವ ಅಪಾರ ಪ್ರಮಾಣದ ಮಾಹಿತಿಗಳನ್ನು, ಹಸ್ತಪ್ರತಿಗಳನ್ನು ಬಳಸಿಕೊಂಡು ಅದರ ನಿಖರತೆಗಾಗಿ ಪ್ರಾಚೀನ ಕಾವ್ಯಗಳ ಜೊತೆ ನಡೆಸುವ ಅನುಸಂಧಾನ ಮಾರ್ಗದಲ್ಲಿದೆ. ಈ ಬಗೆಯ ಸಾಹಿತ್ಯ ಚರಿತ್ರೆಯೊಂದನ್ನು ಕಟ್ಟಲು ದೇಶೀಯವಾಗಿ ಲಭ್ಯವಿರುವ ಪ್ರಾಚೀನ ಕಾವ್ಯಗಳ ಜೊತೆ ಅನುಸಂಧಾನ ಮಾಡಿಕೊಂಡಾಗ ಸಾಧ್ಯವಾಯಿತು. ಕನ್ನಡ ಸಾಹಿತ್ಯದ ಆಳವಾದ ಅಧ್ಯಯನಕ್ಕೆ ತೊಡಗಿದಾಗ ಕಿಟ್ಟೆಲ್‌ರಿಗೆ ಕನ್ನಡ ಸಾಹಿತ್ಯದ ಒಂದು ಚರಿತ್ರೆ ಇಲ್ಲದಿರುವುದು ಕೊರತೆಯಾಗಿ ಕಂಡರೂ, ಮತ್ತೆ ಅವರು ಒಂದು ಸಾಹಿತ್ಯ ಚರಿತ್ರೆಯನ್ನು ಸಾಧ್ಯವಾಗಿಸಿದ್ದು ಇಲ್ಲೇ ಲಭ್ಯವಿದ್ದ ಪ್ರಾಚೀನ ಕಾವ್ಯಗಳ ಉಲ್ಲೇಖದಿಂದ. ಅವರು 'The early period about 800 – 1300 A.D' ಎನ್ನುವ ಭಾಗದಲ್ಲಿ 40 ಜನ ಕವಿಗಳ ಒಂದು ಪಟ್ಟಿಯನ್ನು ನೀಡುತ್ತಾರೆ. ಅವರ ಬಗ್ಗೆ ಕಿಟ್ಟೆಲ್ "The following is an alphabetical list of the early Canarese authors mentioned in Nagavarma, Keshava, Rudra, Salva, Hiranyagarbha, etc. Where an asterisk is added to a name, if denotes that the person concerned may not have written in Canarese"[೧೧] ಎಂದು ಹೇಳುತ್ತಾ ಕೇಶಿರಾಜನ ಶಬ್ದಮಣಿ ದರ್ಪಣ, ನಾಗವರ್ಮನ ಕಾವ್ಯಾವಲೋಕನ ಮತ್ತು ರುದ್ರಭಟ್ಟನ ಜಗನ್ನಾಥ ವಿಜಯ ಮುಂತಾದ ಕೃತಿಗಳಿಂದ ತೆಗೆದುಕೊಂಡಿದ್ದಾರೆ. ಕಾವ್ಯದ ಒಳಗಿಂದಲೇ ಆ ಕಾವ್ಯ ಪರಂಪರೆಯ ಒಂದು ಚರಿತ್ರೆಯನ್ನು ಕಟ್ಟುವುದು ಸಾಧ್ಯ ಎಂಬ ತಿಳುವಳಿಕೆ ಇಲ್ಲಿದೆ. ಮತ್ತು ಕನ್ನಡದ ಕಾವ್ಯಗಳಿಂದಲೇ ಈ ಚರಿತ್ರೆಯನ್ನು ಕಟ್ಟುವುದು ಸಾಧ್ಯ ಎಂಬುದನ್ನು ಮೊದಲು ತೋರಿಸಿಕೊಟ್ಟರು.

ಕಿಟ್ಟೆಲ್‌ರಲ್ಲಿದ್ದ ಸೂಕ್ಷ್ಮತೆ ಅವರು ಅಪರಿಚಿತ ನಾಡಿನ ಭಾಷೆಯನ್ನು ಕಲಿತು ಪ್ರಾಚೀನ ಕಾವ್ಯಗಳನ್ನು ಕುತೂಹಲದಿಂದ ತಿಳಿದು ಅದನ್ನು ಒಂದು ಕಾಲಬದ್ಧ ನೆಲೆಯಲ್ಲಿ

ಸಂಯೋಜಿಸಿಕೊಳ್ಳಲು ಸಾಧ್ಯವಾಯಿತು. ಅವರ ಪ್ರಬಂಧದ ಅನೇಕ ಕಡೆ ಇಂತಹ ಸೂಕ್ಷ್ಮ ದೃಷ್ಟಿಯನ್ನೇ ಕಾಣಬಹುದು. "In Telugu there is a translation of the Prabhulingalile by Pidupati Somayya the Tamil translation is by Sivaprakasha Desika of the 17th Century"[೧೨] ಎಂಬ ಮಾತಿನಲ್ಲಿ ಆ ಸೂಕ್ಷ್ಮ ಹೊಳಹನ್ನು ಕಾಣಬಹುದು.

ಈ ಪ್ರಬಂಧದಲ್ಲಿ ಕೆಲವು ತಪ್ಪು ಊಹೆಗಳೂ ಸಂಭವಿಸಿದೆ. "The name Allama.... Probably is borrowed from Allah, or from 'Alamm' a mysterious word used in Koran for the deity .... The musulman name for god was known in India before Jangama religion arose"[೧೩] ಎಂದು ಊಹಿಸಿದ್ದು ಒಂದು ಪ್ರಮಾದ. ಇನ್ನೂ ಕೆಲವು ಸಂದರ್ಭದಲ್ಲಿ ತಪ್ಪಾಗಿ ಊಹಿಸಿದ್ದರೆ ಅದಕ್ಕೆ ಆ ಕಾಲದ ಸಾಮಗ್ರಿಗಳ ಅಲಭ್ಯತೆಯೂ ಕಾರಣವಾಗಿರಬಹುದು. ಡಾ| ಎಂ.ಎಂ. ಕಲಬುರ್ಗಿಯವರು ಗುರುತಿಸುವಂತೆ "ಶಬ್ದಮಂಜರಿಯ ತೋಂಟದಾರ್ಯನೆಂದರೆ ಎಡೆಯೂರ ನಿದ್ಧಲಿಂಗ ಶಿವಯೋಗಿ, ಕುಮಾರ ವಾಲ್ಮೀಕಿಯ ತೊರವೆ ಸೊಲ್ಲಾಪುರ ಜಿಲ್ಲೆಯ ಒಂದು ಹಳ್ಳಿ, ಕುಮಾರರಾಮ ಚರಿತೆಯ ಕರ್ತೃ ಲಿಂಗಾಯತ ರಂಗಯ್ಯ, ಪುರಂದರದಾಸ, ಕನಕದಾಸರ ಕೀರ್ತನೆ, ಕನಕದಾಸರ ಮೋಹನ ತರಂಗಿಣಿ, ಗಂಗಯ್ಯನ ಕುಮಾರರಾಮಚರಿತೆ, ವಿಠೋಭ ಚರಿತೆಗಳು 'ರಗಳೆ' ಪ್ರಕಾರದಲ್ಲಿ ಬರೆಯಲ್ಪಟ್ಟಿದೆ"[೧೪] ಎಂದು ಹೇಳಿದುದು ಸತ್ಯಕ್ಕೆ ದೂರವಾದ ವಿಷಯ ಎನ್ನುತ್ತಾರೆ.

ಕ್ರಿ.ಶ. 800 ರಿಂದ ತಮ್ಮ ಕಾಲದವರೆಗಿನ ಕನ್ನಡ ಸಾಹಿತ್ಯದ ಸಂಕ್ಷಿಪ್ತವಾದ ಸಮಗ್ರ ಚಿತ್ರಣವನ್ನು ನೀಡುವ ಪ್ರಯತ್ನ ಮಾಡಿದ್ದಾರೆ. ಕಿಟ್ಟೆಲ್‌ರ ಹಿರಿಮೆ ತಮ್ಮ ಕಾಲಕ್ಕೆ ಲಭ್ಯವಿದ್ದ ಮಾಹಿತಿಯನ್ನು ಅವು ಇರುವ ಹಾಗೆ ಕಾಲಾನುಕ್ರಮಣಿಕೆಯಲ್ಲಿ ನೀಡುವ ಪ್ರಯತ್ನವನ್ನು ಮಾತ್ರ ಮಾಡಿದ್ದಲ್ಲ. ಆ ಲಭ್ಯ ಕೃತಿಗಳನ್ನು ವಿಮರ್ಶಿಸುವ ಮೂಲಕ ತನ್ನದೇ ಆದ ಕೆಲವು ಒಳನೋಟಗಳನ್ನು ಸಂಶೋಧನೆಯ ಆಳವಾದ ತಿಳುವಳಿಕೆಯಿಂದಲೇ ತೋರಿಸಿ ಕೊಟ್ಟಿದ್ದಾರೆ. ದೇಶೀಯ ಭಾಷೆಯ ಸಾಹಿತ್ಯಕ್ಕೆ ಅದರ ಭಾಷಿಕ ರಚನೆಗಳನ್ನು ಶೋಧಿಸಿ ಅದರ ಮೂಲಕವೇ ಒಂದು ಅಸ್ತಿತ್ವವನ್ನು ನೀಡಿದ್ದು ಮುಂದೆ ಕನ್ನಡದ ನೆಲದಲ್ಲೇ ಆ ಪ್ರಜ್ಞೆಯನ್ನು ಮೂಡಿಸುವುದಕ್ಕೆ ಸಾಧ್ಯವಾಯಿತು. ಮತೀಯ ಕೆಲಸಕ್ಕೆ ನಿಯೋಜನೆಗೊಂಡ ವ್ಯಕ್ತಿ ಇದೆಲ್ಲವನ್ನು ಮಾಡದೇ ಇದ್ದರೂ ನಡೆಯುತ್ತಿತ್ತು. ಆದರೆ ಕಿಟ್ಟೆಲ್‌ರ ಕನ್ನಡ ಪ್ರೇಮ ಈ ಕೆಲಸವನ್ನು ಮಾಡಿಸಿತು. ಅವರ ಕೆಲಸದ ಗಣನೀಯತೆ ಅರ್ಥವಾಗುವುದು. ಆ ಕೆಲಸವನ್ನು ಅವರ ಕಾಲದಲ್ಲೇ ಇಟ್ಟು ನೋಡಿದಾಗ

ಸರಿಯಾಗಿ ಹಸ್ತಪ್ರತಿಗಳಾಗಲೀ, ಪುಸ್ತಕಗಳಾಗಲೀ ಸಿಗದೇ ಇದ್ದ ಸಂದರ್ಭದಲ್ಲಿ. ಅದಕ್ಕಿಂತ ಪೂರ್ವದಲ್ಲಿ ಆ ಮಾದರಿಯ ಕೆಲಸಗಳು ನಡೆದಿರಲಿಲ್ಲ ಎಂಬುದನ್ನು ನೋಡಿದಾಗ ಅವರ ಕೆಲಸದ ಮಹತ್ವ ಅರಿವಾಗುತ್ತದೆ. ಇಂತಹದ್ದೊಂದು ಪ್ರಯತ್ನವಾಗದ ಹೊರತು ಮುಂದೆ ಬಹು ವಿಸ್ತಾರವಾದ ಸಾಹಿತ್ಯ ಚರಿತ್ರೆಗಳು ನಿರ್ಮಾಣವಾಗುವುದಕ್ಕೆ ಸಾಧ್ಯವಿರಲಿಲ್ಲ. ದಕ್ಷಿಣ ಭಾರತದ ಸಾಹಿತ್ಯ ಪರಂಪರೆಯಲ್ಲಿ ಕನ್ನಡವನ್ನು ಸರಿಸಮಾನವಾಗಿ ಇಟ್ಟು ಕನ್ನಡದ ಸಾಮರ್ಥ್ಯವನ್ನು ಹೊರತೆಗೆದು ತೋರಿಸಿದ್ದು ಬಹುಶಃ ಮುಂದಿನ ಶತಮಾನದಲ್ಲಿ ಕನ್ನಡದ ಕುರಿತಾಗಿ ನಡೆದ ಎಲ್ಲ ಕೆಲಸಗಳ ಬೀಜರೂಪವಾಗಿ ಕಾಣುತ್ತದೆ. “Of the Tamil Literature it has been said by Dr. Caldwell that ‘it is the only vernacular literature in India which has not been content with imitating the Sanscrit, but has honourably attempted to emulate and outshine it.’ But my own impression is that the more Canarese vernacular literature becomes known, the more evident it becomes that it will fully bear comparison with any other vernacular literature of the South.”[೧೫] ಎಂದು ಹೇಳುತ್ತಾರೆ.

ಇಷ್ಟು ಕೆಲಸವನ್ನು ಮಾಡಿಯೂ ತಾವು ಬಹುದೊಡ್ಡ ಸಾಧನೆಯನ್ನು ಮಾಡಿದ್ದೇವೆ ಎಂಬ ಯಾವ ಅಹಂ ಕೂಡ ಅವರಲ್ಲಿಲ್ಲ. ತಾನು ಮಾಡಿದ ಕೆಲಸ ಕನ್ನಡದ ಸಾಹಿತ್ಯ ಚರಿತ್ರೆಯನ್ನು ಕಟ್ಟುವಲ್ಲಿ ಒಂದು ಸಣ್ಣ ಕೊಡುಗೆಯೆಂದು ಹೇಳುವ ಅವರ ವಿನಮ್ರತೆ ಅನುಕರಣೀಯ “May the present volume from a small contribution towards a History of Canarese Literature. Its defects will doubtless be excused by all who know the difficulties connected with first attempts of a similar character”[೧೬] ಎಂದು ಹೇಳುತ್ತಾರೆ.

ಕಿಟ್ಟೆಲ್‌ರ ಸಾಹಿತ್ಯ ಚರಿತ್ರೆಯ ಈ ಎರಡೂ ಪ್ರಬಂಧಗಳೂ “Old Canarese Literature” ಮತ್ತು “An Essay on Canarese Literature” ಕನ್ನಡದ ಮಟ್ಟಿಗೆ ಒಂದು ಗೌರವಾನ್ವಿತ ಅಸ್ತಿತ್ವವನ್ನು ತಂದು ಕೊಟ್ಟ ಕೆಲಸ. ಇದು ಒಂದು ಜ್ಞಾನಶಾಖೆಯನ್ನು ರೂಪಿಸಿದ ಕೆಲಸ. ಕನ್ನಡ ಸಾಹಿತ್ಯ ಚರಿತ್ರೆ ಕನ್ನಡಕ್ಕೆ ತನ್ನ ಗತವನ್ನು ತೋರಿಸಿ ಕೊಟ್ಟದ್ದಕ್ಕಿಂತಲೂ

ಬಹು ಮುಖ್ಯವಾಗಿ ವರ್ತಮಾನವನ್ನೇ ಅನುಭವಜನ್ಯಗೊಳಿಸಿತು. ಈ ಅನುಭವಜನ್ಯತೆಯೇ ಮುಂದೆ ಗತವನ್ನು ಕಟ್ಟುವ ಮತ್ತು ವರ್ತಮಾನವನ್ನು ಬೆಳೆಸುವ ಕಾರ್ಯದ ಕೊಂಡಿಯಾಯಿತು. ಚರಿತ್ರೆಯನ್ನು ಕಟ್ಟುವ ಪ್ರಕ್ರಿಯೆ ಯಾವಾಗಲೂ ಚರಿತ್ರೆಯ ಒತ್ತಡವಾಗದೆ ಅದು ವರ್ತಮಾನದ ಒತ್ತಡವೇ ಆಗಿರುತ್ತದೆ. ಆ ಮೂಲಕ ಅದು ಚರಿತ್ರೆಯನ್ನು ಕಟ್ಟಿದರೂ ಅದು ಬಹಳ ಸೂಕ್ಷ್ಮವಾಗಿ ಕಾಣಿಸುವುದು ವರ್ತಮಾನವನ್ನು. ಕಿಟ್ಟೆಲ್‌ರ ಸಾಹಿತ್ಯ ಚರಿತ್ರೆ ಕನ್ನಡದ ಮಟ್ಟಿಗೆ ಚರಿತ್ರೆಯನ್ನು ಮಾತ್ರ ತೋರಿಸಿಕೊಟ್ಟದ್ದಲ್ಲ. ಅದು ಕನ್ನಡದ ವರ್ತಮಾನವನ್ನು ನಿರೂಪಿಸಿದ್ದು. ಹೀಗಾಗಿ ಕಿಟ್ಟೆಲ್‌ರ ಈ ಸಾಹಿತ್ಯ ಚರಿತ್ರೆ ಭೂತ ಮತ್ತು ವರ್ತಮಾನಗಳ ಒಂದು ಅನುಸಂಧಾನ.

### ೩.೩.೨ ಎಡ್ವರ್ಡ್ ಪಿ. ರೈಸ್: ಶಾಸ್ತ್ರೀಯ ಸಾಹಿತ್ಯ ಚರಿತ್ರೆಯ ನಿರೂಪಕ

ಈ ಕಾಲಕ್ಕಾಗಲೇ ಕಿಟ್ಟೆಲ್‌ರ ಎರಡು ಪ್ರಬಂಧಗಳು, ಆರ್. ನರಸಿಂಹಾಚಾರ್ಯರ ಕವಿಚರಿತೆಯ ಮೊದಲ ಸಂಪುಟ ಪ್ರಕಟವಾಗಿತ್ತು. ಅಂತಹ ಸಂದರ್ಭದಲ್ಲಿ "A History of Kanarese Literature" ಎಂಬ ಕೃತಿಯ ಮೂಲಕ ಮೂಲಕ ಇಂಗ್ಲಿಷ್‌ನಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯೊಂದನ್ನು ನಿರೂಪಿಸಿದರು. ಅವರು ತನ್ನ ಕೃತಿಯ ಮೊದಲ ಆವೃತ್ತಿಯ ಮುನ್ನುಡಿಯಲ್ಲಿ ತಾನು ರಚನೆ ಮಾಡುತ್ತಿರುವ ಈ ಕೃತಿಯ ಹಿನ್ನೆಲೆಯನ್ನು ಸೂಕ್ಷ್ಮವಾಗಿ ತಿಳಿಸಿದ್ದಾರೆ. "ನನಗೆ ತಿಳಿದು ಬಂದ ಮಟ್ಟಿಗೆ ಕನ್ನಡ ಸಾಹಿತ್ಯ ಚರಿತ್ರೆಯನ್ನು ಹೇಳುವ ಒಂದು ಪ್ರತ್ಯೇಕ ಗ್ರಂಥವು ಇಂಗ್ಲೀಷ್‌ನಲ್ಲಿಲ್ಲ"[೧೭] ಎನ್ನುತ್ತಾರೆ. "ಕರ್ನಾಟಕ ಕವಿಚರಿತೆಯು ಕನ್ನಡದಲ್ಲಿರುವುದರಿಂದ ಕನ್ನಡ ಬಲ್ಲವರಿಗಷ್ಟೆ ಉಪಯುಕ್ತವಾಗಿದೆ"[೧೮] ಎಂಬ ಮಾತುಗಳು ತಾನು ರಚಿಸುತ್ತಿರುವ ಕೃತಿಯ ಅವಶ್ಯಕತೆಯನ್ನು ಮತ್ತು ಉದ್ದೇಶವನ್ನು ತಿಳಿಸುತ್ತವೆ. ಈ ಉದ್ದೇಶದ ಮಾತುಗಳೇ ಇ.ಪಿ. ರೈಸ್‌ರ ಸಾಹಿತ್ಯ ಚರಿತ್ರೆಯ ರಚನೆಯ ಹಿಂದಿರುವ ತಾತ್ವಿಕತೆಯನ್ನು ಅನಾವರಣ ಮಾಡುತ್ತದೆ. ಇ.ಪಿ. ರೈಸ್ ತಾನು ಸಾಹಿತ್ಯ ಚರಿತ್ರೆಯನ್ನು ಇಂಗ್ಲೀಷ್‌ನಲ್ಲಿ ಕಟ್ಟುತ್ತಿರುವುದು ಈವರೆಗೆ ಕನ್ನಡ ಸಾಹಿತ್ಯ ಚರಿತ್ರೆಯ ಕೃತಿಗಳು ಇಂಗ್ಲೀಷ್‌ನಲ್ಲಿ ಇಲ್ಲ ಎಂಬ ಕೊರತೆಯನ್ನು ನೀಗಲು. ಅದರ ಜೊತೆಗೆ ರೈಸ್ ಕನ್ನಡದ ಸಾಹಿತ್ಯ ಚರಿತ್ರೆಯ ಹರಿವಿನ ಒಂದು ಸೂಕ್ಷ್ಮ ಒಳಧಾರೆಯನ್ನು ಗುರುತಿಸಲು ಸಾಧ್ಯವಾದದ್ದು ಅವರ ಗ್ರಹಿಕೆಯ ಸೂಕ್ಷ್ಮತೆಗೆ ಪ್ರತೀಕವಾಗಿದೆ. ಮುನ್ನುಡಿಯಲ್ಲಿ ಅವರು ಹೇಳುವ ಮಾತು ಗಮನಾರ್ಹವಾದದ್ದು. ಕನ್ನಡ ಕಾವ್ಯ ಪರಂಪರೆ ತಾನಾಗಿಯೇ ಕಟ್ಟಿಕೊಂಡ ಅಥವಾ ತನ್ನ ವಿನ್ಯಾಸದ ಒಳಗೆಯೇ ಒಳಗೊಂಡ ಒಂದು ಸಾಹಿತ್ಯ ಚರಿತ್ರೆಯ ಕ್ರಮವನ್ನು ಅವರು ಗುರುತಿಸಿದ್ದಾರೆ. ಅವರು ಹೇಳುವಂತೆ "ಕನ್ನಡ ಕವಿಗಳು ತಮ್ಮ ಕಾವ್ಯಾರಂಭದಲ್ಲಿ ದೇವತೆಗಳನ್ನು ಮತ್ತು ಋಷಿಮುನಿಗಳನ್ನು ಪ್ರಾರ್ಥಿಸುವುದಲ್ಲದೆ ತಮ್ಮ ಪೂರ್ವ ಕವಿಗಳನ್ನು ಸ್ತುತಿಸುತ್ತಾರೆ. ಈ ಪದ್ಧತಿಯು ಅತ್ಯಂತ ಮಹತ್ವದ ಐತಿಹಾಸಿಕ ಮೌಲ್ಯವನ್ನು ಹೊಂದಿದೆ. ಏಕೆಂದರೆ ಇದರಿಂದ ಪ್ರಾಚೀನ ಕವಿಗಳನ್ನು

ಕಾಲಮಾನಕ್ಕನುಗುಣವಾಗಿ ಅವರವರ ಸರಿಯಾದ ಪಂಕ್ತಿಯಲ್ಲಿ ಸೇರಿಸಲು ಸಾಧ್ಯವಾಗುತ್ತದೆ. ಅಲ್ಲದೆ ಇನ್ನೂ ಕೆಲ ಸಂದರ್ಭಗಳಲ್ಲಿ ಕವಿಗಳು ಕಾವ್ಯಗಳಲ್ಲಿ ತಮ್ಮ ಪೋಷಕ ರಾಜರನ್ನು ಹೆಸರಿಸುವುದರಿಂದ ಅನೇಕ ಕವಿಗಳ ಬಹುಶಃ ನಿಶ್ಚಿತ ಕಾಲಾವಧಿಯನ್ನು ಕೊಡಬಹುದು. ಈ ಪ್ರಕಾರ ಕನ್ನಡ ಕವಿಗಳ ಪಟ್ಟಿಯನ್ನು ಬಹುಮಟ್ಟಿಗೆ ಸರಿಯಾದ ಕ್ರಮದಲ್ಲಿ ಕೊಡಬಹುದು. ಇದೆಲ್ಲದರ ಫಲವಾಗಿ ಕನ್ನಡದಲ್ಲಿ ಅಪಾರ ಸಾಹಿತ್ಯ ರಾಶಿ ಇದ್ದು ಕನ್ನಡ ಸಾಹಿತ್ಯದ ಉದಯವು ಕ್ರಿಸ್ತಶಕದ ಆರಂಭದ ಶತಮಾನಗಳ ಮಂಜಿನಲ್ಲಿ ಕಾಣದೆ ಹೋಗಿದೆ ಎಂದು ಹೇಳುವಷ್ಟರ ಮಟ್ಟಿಗೆ ಪ್ರಾಚೀನತೆಯು ಕನ್ನಡ ಸಾಹಿತ್ಯಕ್ಕಿದೆ ಎಂಬುದು ತಿಳಿದು ಬಂದಿದೆ."[೧೯] ಈ ಮಾತು ರೈಸ್ ಅವರು ಕನ್ನಡ ಸಾಹಿತ್ಯವನ್ನು ಗ್ರಹಿಸಿಕೊಂಡ ಸೂಕ್ಷ್ಮತೆಗೆ ಕನ್ನಡಿಯಾಗಿದೆ. 

ಈ ಮಾತುಗಳಲ್ಲಿ ಮುಖ್ಯವಾಗಿ 2 ಪ್ರಮುಖ ಅಂಶಗಳನ್ನು ಗುರುತಿಸಬಹುದಾಗಿದೆ.

1) ಒಂದು ಸಾಹಿತ್ಯ ಪರಂಪರೆಯೇ ತಾನೇ ನಿರ್ಮಿಸಿಕೊಳ್ಳುವ ಚರಿತ್ರೆಯ ಸ್ವರೂಪವನ್ನು ಗುರುತಿಸುತ್ತಾರೆ. ಕನ್ನಡದ ಕವಿಗಳು ತಮ್ಮನ್ನು ತಾವು ಒಂದು ಸಾಹಿತ್ಯ ಪರಂಪರೆಯ ಮುಂದುವರಿಕೆಯ ಕೊಂಡಿಗಳು ಎಂಬಂತೆ ಪರಿಗಣಿಸಿಕೊಂಡಿದ್ದರು. ಪೂರ್ವ ಕವಿಗಳನ್ನು ಸ್ಮರಿಸುವ ಮೂಲಕ ಒಂದು ಚಲನಾತ್ಮಕ ಪರಂಪರೆಯನ್ನು ಕಟ್ಟಿದ್ದಾರೆ. ಹಾಗಾಗಿ ಈ ಪದ್ಧತಿಯನ್ನು ರೈಸ್ ಅವರು 'ಮಹತ್ವದ ಐತಿಹಾಸಿಕ ಮೌಲ್ಯವನ್ನು ಹೊಂದಿದೆ' ಎಂದು ಹೇಳುತ್ತಾರೆ. ಬಹುಶಃ ಒಂದು ಭಾಷೆಯ ಸಾಹಿತ್ಯ ಚರಿತ್ರೆ ಎಂಬ ಆಧುನಿಕ ಶಿಸ್ತನ್ನು ಕಟ್ಟುವ ರೈಸರಿಗೆ ಪ್ರಾಚೀನ ಈ 'ಕವಿಸ್ತುತಿ' ಪರಂಪರೆ ಸಹಾಯ ಆಗಿರಬಹುದು. ಕವಿಯ, ಕೃತಿಯ ಕಾಲವನ್ನು ನಿರ್ಧರಿಸುವ ಪೂರ್ವ ಪ್ರಮೇಯಗಳನ್ನು ಕಟ್ಟಿಕೊಳ್ಳಲು ಅದು ಆಕರಗಳಾಗಿದ್ದಿರಬಹುದು.

2) ಕನ್ನಡ ಸಾಹಿತ್ಯ ಪರಂಪರೆಯನ್ನು ಅದರ ಉದಯದ ಕಾಲವನ್ನು ಕ್ರಿಸ್ತಶಕದ ಆರಂಭಕ್ಕೆ ಕೊಂಡೊಯ್ದುದು ಅದರ ಪ್ರಾಚೀನತೆಯನ್ನು ಹಿಗ್ಗಿಸುವ ಕ್ರಮವೇ ಆದರೂ ಅದು ಈ 'ಪೂರ್ವ ಕವಿ ಸ್ಮರಣೆ'ಯ ಫಲಿತವೇ ಆಗಿದೆ. ಇನ್ನೊಂದೆಡೆ ರೈಸ್ ತಾವು ಕಟ್ಟುವ ಸಾಹಿತ್ಯ ಚರಿತ್ರೆಯ ಸ್ವರೂಪವನ್ನು, ಅದರ ಪ್ರಮುಖ ಅಂಶವನ್ನು ಇಲ್ಲಿ ಹೇಳುತ್ತಾರೆ. ರೈಸ್ ಅವರಿಗೆ ಕವಿಗಳ ಕಾಲದ ಖಚಿತತೆ ಎಂಬುದು ಬಹು ಮುಖ್ಯವಾದ ಅಂಶವಾಗಿದ್ದು, ಅದಕ್ಕೆ ಬೇಕಾದ ಒಂದು ನೆಲೆಯನ್ನು ಪೂರ್ವ ಕವಿ ಸ್ತುತಿ ನೀಡುತ್ತದೆ. ರೈಸ್ ಅವರು ಸಾಹಿತ್ಯ ಚರಿತ್ರೆಯನ್ನು ಕಟ್ಟುತ್ತಲೇ 'ಕನ್ನಡದ ಪೂರ್ವ ಕವಿಸ್ತುತಿ' ಪರಂಪರೆಯ ಜೊತೆ ಮುಖಾಮುಖಿಯಾಗುತ್ತಾರೆ. ಈ ಮುಖಾಮುಖಿಯಲ್ಲಿ ನಿರಾಕರಿಸುವ ಸಂಘರ್ಷ ಇಲ್ಲ. ಬದಲಿಗೆ ಇದು ಅದರ ಜೊತೆ ಬಹು ಆಪ್ತವಾಗಿ, ಅದನ್ನೇ ತನ್ನ ತೆಕ್ಕೆಗೆ ಒಕ್ಕೈಸಿಕೊಂಡು ನಡೆಸುವ ಸಂಧಾನದ ನಡೆ ಇದೆ. ಈ ಸಂಧಾನದ ನಡೆಯನ್ನು ಹಿಂದೆ ಕಿಟ್ಟೆಲ್‌ರು ಗುರುತಿಸಿರುವರಾದರೂ ಪ್ರಜ್ಞಾಪೂರ್ವಕವಾಗಿ ಇದೊಂದು ಐತಿಹಾಸಿಕ ಮೌಲ್ಯವಿರುವ ಸಂಗತಿ ಎಂಬ ತಿಳುವಳಿಕೆ ಇರಲಿಲ್ಲ.

ಸಾಹಿತ್ಯ ಚರಿತ್ರೆ ಎಂಬ ಪರಿಕಲ್ಪನೆಯನ್ನು ರೈಸ್‌ರವರು ಗ್ರಹಿಸಿದ ಬಗೆಯೇ ಒಂದು ರೀತಿಯಲ್ಲಿ ವಿಶಿಷ್ಟವಾದುದು. ತನ್ನ ಕೃತಿಯ ಪ್ರಕಟಣೆಯ ಪೂರ್ವದಲ್ಲೇ ಆಗಾಗಲೇ ಉಪಲಬ್ಧವಿದ್ದ ಲೂಯಿರೈಸ್‌ರ 'Mysore and Coorg from Inscriptions' ಎಂಬ ಗ್ರಂಥದಲ್ಲಿನ ಕನ್ನಡ ಸಾಹಿತ್ಯದ ಬಗೆಗಿನ ವಿವೇಚನೆಯನ್ನು, ಆರ್. ನರಸಿಂಹಾಚಾರ್ಯರ ಕವಿಚರಿತೆಯ ಮೊದಲ ಸಂಪುಟವನ್ನು ಓದಿ ಬಂದ ಅಭಿಪ್ರಾಯ ಹೀಗಿದೆ. "ಅಷ್ಟೊಂದು ಪ್ರಮುಖರಲ್ಲದ ಎಲ್ಲ ಕವಿಗಳನ್ನು ಪಟ್ಟಿ ಮಾಡಿದರೆ ಓದುಗನಿಗೆ ಬೇಸರವಲ್ಲದೆ ಮತ್ತೇನೂ ಅಲ್ಲ. ಸಾಧ್ಯವಾದಷ್ಟು ಪ್ರಾದೇಶಿಕ ಬಣ್ಣ ಕೊಟ್ಟು ಆ ಕವಿಗಳು ಬಾಳಿದ ಕಾಲಮಾನದ ಹಿನ್ನೆಲೆಯನ್ನು ಅವರು ನಂಬಿದ ಧರ್ಮನಿಷ್ಠೆಯ ಸಂಪ್ರದಾಯಗಳ ವಾತಾವರಣವನ್ನು ಚಿತ್ರಿಸಿ ಓದುಗನ ಪ್ರಯಾಸವನ್ನು ಕಡಿಮೆ ಮಾಡಲು ಪ್ರಯತ್ನಿಸಿದ್ದೇನೆ. ಭಾರತೀಯ ಓದುಗರಿಗೆ ವಿವರಣೆಗಳು ಅವಶ್ಯವಿಲ್ಲದಂಥ ಭಾರತೀಯ ಅನೇಕ ವಿಶಿಷ್ಟ ಶಬ್ದಗಳನ್ನು ಇಂಗ್ಲಿಷ್ ಓದುಗನಿಗಾಗಿ ವಿವರಿಸಿದ್ದೇನೆ."[೨೦] ಈ ಮಾತುಗಳು ಸಾಹಿತ್ಯ ಚರಿತ್ರೆ ಎಂಬುದು ಈವರೆಗಿನ ಒಟ್ಟಾದ ಮತ್ತು ಸಮಗ್ರವಾದ ಕೃತಿ-ಕೃತಿಕಾರರ ಪರಿಚಯ ಮತ್ತು ಕೃತಿ ಮೌಲ್ಯ ವಿಮರ್ಶೆಯಾಗದೆ ಅದು ತಾನೇ ಆಯ್ಕೆ ಮಾಡಿದ ಕೆಲವು ಕೃತಿಕಾರರನ್ನು ಚಿತ್ರಿಸುವುದು ಎಂದಾಗಿದೆ. ತನ್ನ ಕೃತಿಯ ಪ್ರಕಟಣೆಯ ಪೂರ್ವದಲ್ಲಿ ಬಂದ ಕರ್ನಾಟಕ ಕವಿಚರಿತೆಯ ಮೊದಲ ಸಂಪುಟವನ್ನು ನೋಡಿ ಇಂತಹ ನಿಲುವಿಗೆ ಬಂದಿರಬಹುದು. ಸಾಹಿತ್ಯ ಚರಿತ್ರೆಯ ರಚನೆಯ ಹಿಂದಿರುವ ಒಂದು ತಿಳುವಳಿಕೆ ತನ್ನ ಕಾಲದಲ್ಲಿ ಲಭ್ಯವಿರುವ ಎಲ್ಲಾ ಬರಹಗಾರರ ಮೂಲಕ ಕಟ್ಟಲ್ಪಡುವುದು. ಆದರೆ ಇದು ಚರಿತ್ರೆಕಾರನೇ ತನ್ನ ಆಯ್ಕೆಯ ಮಾನದಂಡಗಳಿಗೆ ಒಪ್ಪಿತವಾಗದವರನ್ನು ಓದುಗರಿಂದ ಉದ್ದೇಶಪೂರ್ವಕವಾಗಿ ದೂರವಿಟ್ಟಂತೆ ಆಗುತ್ತದೆ. ಒಬ್ಬ ಸಾಹಿತ್ಯ ಚರಿತ್ರೆಕಾರನಿಗೆ ಈ ಬಗೆಯ ಹೊಣೆಗಾರಿಕೆ ಅಂದರೆ ಓದುಗನಿಗೆ ಓದು ಬೇಸರವಾಗದಿರಲಿ ಎಂದು ಕೆಲವನ್ನು ಹೇಳದೆ ಮೊಟಕುಗೊಳಿಸಬಹುದೆ? ಹೀಗೆ ಆಗುವುದಾದರೆ ಇದು ವ್ಯಕ್ತಿ ನೆಲೆಯ ಮಾದರಿಯ ಮಿತಿಯಾಗಿ ಬಿಡುತ್ತದೆ. ಇದು ಆಯ್ದ ಸಾಹಿತ್ಯದ ಚರಿತ್ರೆಯಾಗಬಹುದು. ರೈಸರ ಈ ಬಗೆಯ ಪ್ರಯತ್ನ ಅವರು ಸಾಹಿತ್ಯ ಚರಿತ್ರೆಯನ್ನು ಗ್ರಹಿಸಿದ ಒಂದು ದೋಷ ಎಂದು ಪರಿಗಣಿಸಬೇಕಾಗುತ್ತದೆ.

ಒಂದು ಭಾಷೆಯ ಸಾಹಿತ್ಯದ ಬೆಳವಣಿಗೆಯನ್ನು ಗುರುತಿಸುವಾಗ ಆ ಸಾಹಿತ್ಯ ಮೈತಳೆದ ಭಾಷೆಯನ್ನು ಅದರ ಅವಸ್ಥಾಂತರಗಳನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳಬೇಕು. ಎಫ್.ಕಿಟ್ಟೆಲ್‌ರಾಗಲೀ, ಇ.ಪಿ.ರೈಸ್‌ರಾಗಲೀ ಈ ಕೆಲಸವನ್ನು ಮಾಡಿಕೊಂಡೇ ಸಾಹಿತ್ಯದ ಬೆಳವಣಿಗೆಯನ್ನು ಗುರುತಿಸಿದ್ದು. "ಹಳಗನ್ನಡವೆಂದರೆ ಇದೊಂದು ಪ್ರಚಲಿತವಲ್ಲದ ಭಾಷಾರೂಪವೆಂದು ತಿಳಿಯಕೂಡದು. ದಿನನಿತ್ಯದ ಮಾತುಕತೆಯಲ್ಲಿ ಇದು ತನ್ನ ಉಪಯುಕ್ತತೆಯನ್ನು ಕಳೆದುಕೊಂಡಿರಬಹುದು. ಆದರೆ

ಇದರ ಶಬ್ದ ಸಂಚಯ ಮತ್ತು ವಿಭಕ್ತಿ ಪ್ರತ್ಯಯ ರೂಪಗಳಿಂದಾಗಿ ಈಗಲೂ ಇದು ಪದ್ಯರಚನೆಯಲ್ಲಿ ಉಪಯೋಗವಾಗುತ್ತಲಿದೆ. ಆದ್ದರಿಂದ 'ಹಳೆಗನ್ನಡ' ಈ ಶಬ್ದವು ಕೆಲವೊಮ್ಮೆ ಬರೆಯುವ ಒಂದು ವಿಶಿಷ್ಟ ಬಗೆಯ ಪ್ರಾಚೀನ ಶೈಲಿ ಎಂಬುದನ್ನು ಸೂಚಿಸುತ್ತದೆ."[೨೧] ಈ ನಿಲುವು ಹಳೆಗನ್ನಡದ ಕಾವ್ಯದ ಶಕ್ತಿಯನ್ನು ಅರಿತುಕೊಂಡಾಗ ಮಾತ್ರ ಬರಬಹುದು. ಇಲ್ಲವಾದರೆ ಅದು ಉಪಯೋಗವಿಲ್ಲದ ಒಂದು ಪ್ರಾಚೀನರೂಪ ಎಂದಷ್ಟೇ ಹೇಳುತ್ತಿದ್ದರು. ಹಳೆಗನ್ನಡದ 'ಶಬ್ದ ಸಂಚಯ'ದ ಉಪಯೋಗ ಈಗಲೂ ನಡೆಯುತ್ತಿದೆ. ದಿನನಿತ್ಯದ ಮಾತುಕತೆಯಲ್ಲಿ ಉಪಯುಕ್ತತೆಯನ್ನು ಕಳೆದುಕೊಂಡಿದೆಯಷ್ಟೇ ಎಂಬುದನ್ನು ಪ್ರಾಮಾಣಿಕವಾಗಿ ಗುರುತಿಸುತ್ತಾರೆ.

ಕನ್ನಡ ಸಾಹಿತ್ಯ ಚರಿತ್ರೆಯ ಕಾಲ ವಿಭಾಗಗಳನ್ನು ಮಾಡುವಾಗ ಅವರ ಮುಂದೆ ಇದ್ದ ಒಂದು ಮಾದರಿ, ಮಾನದಂಡ ಯಾವುದೆಂದರೆ ಆಯಾ ವೇಳೆ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಮತಪದ್ಧತಿ. ಕಿಟ್ಟೆಲ್‌ರಿಂದ ಮೊದಲುಗೊಂಡು ಈ ವಿಭಜನ ಕ್ರಮ ರೂಢಿಗೆ ಬಂದು ಬೆಳವಣಿಗೆಯನ್ನು ಪಡೆಯಿತು. ಕಾಲದ ಚಲನೆಯನ್ನು ಆಧಾರವಾಗಿಟ್ಟುಕೊಂಡು ನೋಡಲು ಸಾಧ್ಯವಾಗಿದ್ದರೆ ಕೃತಿಯ ಒಳಗನ್ನು ಬಗೆಯಬಹುದಾಗಿತ್ತು. ವಸ್ತು ವಿಶ್ಲೇಷಣೆಯಿಂದಾಗಿ ಆ ಕಾಲದ ಸಾಮಾಜಿಕ, ಧಾರ್ಮಿಕ ಒತ್ತಡಗಳನ್ನು ಗುರುತಿಸಬಹುದಾಗಿತ್ತು. ಆದರೆ ಕೃತಿಯ ಬಾಹ್ಯ ಸಂಗತಿಯ ಮೂಲಕ ಕೃತಿಯ ಅಂತರಂಗವನ್ನು ಪ್ರವೇಶಿಸಿದ್ದು, ಮಹತ್ವಪೂರ್ಣವಾದ ಒಳನೋಟಗಳಿಂದ ಹೊರತಾಗುವಂತೆ ಮಾಡಿತು. ಜೈನರಿಗಿಂತ ಹೇಗೆ ಲಿಂಗಾಯತ ಸಾಹಿತ್ಯ ಭಿನ್ನ. ಲಿಂಗಾಯತಕ್ಕಿಂತ ವೈಷ್ಣವ ಹೇಗೆ ಭಿನ್ನ ಎಂಬ ನೆಲೆಯಿಂದ ನೋಡುವುದು ಸ್ವತಃ ಅದು ಅದಾಗಿಯೇ ಹೇಗೆ ವಿಶಿಷ್ಟ ಎಂದು ನೋಡಬಹುದಾಗಿದ್ದ ಸಾಧ್ಯತೆಯನ್ನು ತಪ್ಪಿಸಿತು. ಮುಂದೆ ಇದು ಸಾಧ್ಯವಾದದ್ದು ಕವಿ ಕೇಂದ್ರಿತವಾಗಿ ಪ್ರತ್ಯೇಕ ಪ್ರತ್ಯೇಕಗೊಳಿಸಿ ನೋಡಿದಾಗಿನಿಂದ.

ಕವಿರಾಜಮಾರ್ಗದ ಪೂರ್ವದಲ್ಲಿದ್ದ ಸಮಂತ ಭದ್ರ, ಕವಿ ಪರಮೇಷ್ಠಿ, ಪೂಜ್ಯಪಾದ ದುರ್ವಿನೀತರ ಬಗೆಗೆ ಕೆಲವು ಮಹತ್ವಪೂರ್ಣವಾದ ಒಳನೋಟಗಳನ್ನು ಇಲ್ಲಿ ನೀಡುತ್ತಾರೆ. ಕವಿರಾಜಮಾರ್ಗದ ಶೈಲಿಯೇ ಆ ಕಾಲಕ್ಕಾಗಲೇ ಪದ್ಯ ಸಾಹಿತ್ಯವು ಬಹಳ ಪ್ರಾಚೀನವಾಗಿತ್ತು ಎಂಬುದನ್ನು ಊಹಿಸಲು ಮುಖ್ಯ ಆಧಾರವೆಂಬುದನ್ನು ಒಪ್ಪಿಕೊಳ್ಳುತ್ತಾರೆ. 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್' ಎಂಬ ಪದ್ಯ ಭಾಗವನ್ನು ಉಲ್ಲೇಖಿಸುತ್ತಾ ಕನ್ನಡದ ಕಾವ್ಯ ಪರಂಪರೆ ಇಲ್ಲಿನ ಜನರಲ್ಲಿ ಸ್ವಾಭಾವಿಕವಾಗಿ ಬಂದಿದೆ ಎಂಬುದಕ್ಕೆ ಸಾಕ್ಷಿಭೂತವಾಗಿ ಕವಿರಾಜಮಾರ್ಗಕಾರ ನೀಡಿದ್ದು ಎಂದು ಒಪ್ಪಿಕೊಳ್ಳುತ್ತಾರೆ.

ಜೈನ ಕಾವ್ಯ ಪರಂಪರೆಯ ಬೆಳವಣಿಗೆಯನ್ನು ಕವಿರಾಜಮಾರ್ಗಪೂರ್ವಕಾಲದಿಂದಲೇ ಬಹಳ ವಿಸ್ತಾರವಾಗಿ ವಿವರಿಸಲಾಗಿದೆ. ಕವಿ–ಕಾಲ–ಆಶ್ರಯ ನೀಡಿದ ರಾಜರುಗಳು ಹಾಗೂ ಕಾವ್ಯವಸ್ತುವನ್ನು ವಿವೇಚಿಸುತ್ತಾರೆ. ಆದರೆ ರೈಸ್ ಅವರು ಲಿಂಗಾಯತ ಧರ್ಮದ ಉದಯದ ಬಗ್ಗೆ

ಹೇಳುವಾಗ ಲಿಂಗಾಯತ ಅಥವಾ ವೀರಶೈವ ಪರಂಪರೆ, ಅದರ ವಿಶೇಷತೆಗಳೆಲ್ಲವನ್ನು ಹೇಳಿದವರು ಮುಂದೆ ಕೆಲವು ಕವಿಗಳ ಹೆಸರನ್ನು ಮಾತ್ರ ಗುರುತಿಸುತ್ತಾರೆ. ಈ ಕವಿಗಳಿಂದ ವೀರಶೈವ ಪರಂಪರೆ ಹೇಗೆ ಬೆಳೆಯಿತು ಎಂದು ಹೇಳಲಾಗಿದೆಯೇ ಹೊರತು ಅವರಿಂದ ಕನ್ನಡ ಸಾಹಿತ್ಯ ಹೇಗೆ ಬೆಳೆಯಿತು ಎಂದು ಹೇಳುವ ಮಾತುಗಳು ಬಹಳ ಗಂಭೀರ ಸಂಗತಿಗಳಾಗದೆ ಉಳಿದುದು ವಿಶೇಷ. ಮುಖ್ಯವಾಗಿ ಕವಿಗಳ ಮತನಿಷ್ಠೆ ಹಾಗೂ ಮತತತ್ವ ಪ್ರಚಾರದ ಸಾಧನಗಳು ಎಂಬಂತೆ ಪರಿಗಣಿಸಿ ಒಂದು ಧಾರ್ಮಿಕ ಇತಿಹಾಸವನ್ನು ಬರೆಯಲಾಯಿತೇ ವಿನಃ ಅದೊಂದು ಸಾಹಿತ್ಯ ಚರಿತ್ರೆಯಾಗಿ ರೂಪು ತಾಳಲಿಲ್ಲ. 12ನೇ ಶತಮಾನದಲ್ಲಿ ಒಂದು ದೊಡ್ಡ ಚಳವಳಿ ರೂಪು ತಾಳಿದ ಮತ್ತು ಕ್ರಾಂತಿಯ ರೂಪಕದಂತಿರುವ 'ವಚನ' ಸಾಹಿತ್ಯ ಮುಖ್ಯ ಪರಿಪ್ರೇಕ್ಷ್ಯದಲ್ಲಿರಬೇಕಾದುದು ವೀರಶೈವ ಮತದ ವಿವರಣೆಯಲ್ಲಿ ಕಳೆದು ಹೋಗಿದೆ. ತೀರಾ ಸಾಂಕೇತಿಕವಾಗಿ ಎಂಬಂತೆ ಬಸವಣ್ಣ ಮತ್ತು ಅಕ್ಕನ ವಚನಗಳು ಉಲ್ಲೇಖಗೊಂಡಿದೆಯೇ ಹೊರತು ಇಡೀ ಸಾಹಿತ್ಯ ಚರಿತ್ರೆಯ ಒಡಲಾಗಿ ವಚನರೂಪವೇ ಕಟ್ಟಿದ ಸಾಹಿತ್ಯದ ಕುರಿತು ಗಮನ ಗಂಭೀರವಾಗಿಲ್ಲವೆಂದೇ ತೋರುತ್ತದೆ. ಆವರೆಗಿನ ಸಾಹಿತ್ಯದ ಚಲನೆಗಿಂತ ಬಹು ಭಿನ್ನವಾಗಿ ರಾಜಾಶ್ರಯದಿಂದ ಹೊರಬಂದು ಒಂದು ಜನಸಮುದಾಯದ ನಡುವೆಯೇ ಬೆಳೆದ ಈ ಚಳವಳಿಯ ಸ್ವರೂಪವನ್ನು ಗ್ರಹಿಸಲು ಸಾಧ್ಯವಾಗಿಲ್ಲ. ವಚನ ಎನ್ನುವ ರೂಪವೇ ಕಾವ್ಯ ಪರಂಪರೆಯಲ್ಲಿ ಉಂಟು ಮಾಡಿದ ಬದಲಾವಣೆ ಮತ್ತು ಇಡೀ ಶತಮಾನದುದ್ದಕ್ಕೂ ಒಂದು ಕೊಂಡಿಯಂತೆ ವಚನಕಾರರ ನಡುವಿನ ಅರ್ಥವತ್ತಾದ ಒಂದು ಸಂವಾದವನ್ನು ಹುಟ್ಟು ಹಾಕಿಸಿದ 'ಅನುಭವ ಮಂಟಪ'ದ ಪ್ರಾಮುಖ್ಯತೆಯನ್ನು ಗುರುತಿಸಲಾಗಲಿಲ್ಲ.

ವಚನಕಾರರನ್ನು ರೈಸ್ ಗುರುತಿಸುವುದು 'ಲಿಂಗಾಯತ ಮತದ ಧರ್ಮೋಪದೇಶಕರು' ಎಂದು. ರೈಸ್ ಅವರ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚರಿತ್ರೆಯು ನಿರೂಪಣೆಯಾದ ಬಗೆ ಯಾವುದೆಂದರೆ, ಇಲ್ಲಿ ಚರಿತ್ರೆಯನ್ನು ಕಟ್ಟುತ್ತಿಲ್ಲ. ಬದಲಾಗಿ ಈಗಾಗಲೇ ಕಟ್ಟಲಾದ ಪುರಾಣಗಳನ್ನು ಚರಿತ್ರೆಯಾಗಿ ನಿರೂಪಿಸುತ್ತಾರೆ. "ಲಿಂಗಾಯತ ಪರಂಪರೆಯಂತೆ, ಅರಸನು ಇಬ್ಬರು ಲಿಂಗಾಯತ ಧರ್ಮೀಯರ ಕಣ್ಣುಗಳನ್ನು ಕೀಳಿಸಲು ಬಯಸಿದಾಗ ಬಸವಣ್ಣನು ಕಲ್ಯಾಣವನ್ನು ಶಪಿಸಿ ತನ್ನ ಶಿಷ್ಯನೊಬ್ಬನಿಗೆ ಅರಸನನ್ನು ಕೊಲ್ಲಲು ನಿರ್ದೇಶಿಸುತ್ತಾನೆ. ಮತ್ತು ಸಂಗಮೇಶ್ವರಕ್ಕೆ ಓಡಿ ಹೋಗಿ ಅಲ್ಲಿಯೇ ಲಿಂಗದಲ್ಲಿ ಐಕ್ಯನಾಗುತ್ತಾನೆ" ಎಂದು ಹೇಳುವ ಮಾತುಗಳು ಲಿಂಗಾಯತ ಪುರಾಣದಲ್ಲಿದೆ. ಆದರೆ ಇದನ್ನು ರೈಸರು ತಮ್ಮ ಸಾಹಿತ್ಯ ಚರಿತ್ರೆಯಲ್ಲಿ ಒಂದು ಚರಿತ್ರೆಯೇ ಎಂಬಂತೆ ನಿರೂಪಿಸಿದ್ದಾರೆ. ಹೀಗಾಗಿ ಇಲ್ಲಿ ಚರಿತ್ರೆಯನ್ನು ಕಟ್ಟುತ್ತಿಲ್ಲ ಎಂಬ ಮಾತನ್ನು ಹೇಳಲಾಗಿದೆ.

ರೈಸ್ ಅವರ ಸಾಹಿತ್ಯ ಚರಿತ್ರೆಯ ಶ್ರೇಷ್ಠತೆಯನ್ನು ಗುರುತಿಸಲು ಅನೇಕ ಕಾರಣಗಳಿವೆ. ಬಹಳ ಮುಖ್ಯವಾಗಿರುವ ಸಂಗತಿ, ಅವರು ಲಿಂಗಾಯತ ಕವಿಗಳು (1160 – 1600 ರವರೆಗೆ)

ಎಂಬ ಅಧ್ಯಾಯದಲ್ಲಿ 'ಹಳಗನ್ನಡದಿಂದ ನಡುಗನ್ನಡಕ್ಕೆ ಸಂಕ್ರಮಣ' ಎಂಬ ಅಂಶವನ್ನು ಗುರುತಿಸುತ್ತಾರೆ. "ಲಿಂಗಾಯತ ಯುಗದ ಪೂರ್ವಭಾಗವು ವ್ಯಾಕರಣ ರೂಢಿಗಳಲ್ಲಿ ಮತ್ತು ಸಾಹಿತ್ಯಿಕ ರೂಪದಲ್ಲಿ ಅನೇಕ ಮಹತ್ವದ ಬದಲಾವಣೆಗಳನ್ನು ಒಳಗೊಂಡಿದೆ ಎಂಬ ವಿಷಯವು ಎದ್ದು ತೋರುವಂತಹುದಾಗಿದೆ. 'ಱ' ಅಕ್ಷರವನ್ನು ಸಂಪೂರ್ಣವಾಗಿ ಬಿಟ್ಟುಕೊಡಲಾಯಿತು. ಮತ್ತು ಅದರ ಸ್ಥಾನದಲ್ಲಿ 'ಳ' ಅಥವಾ ಅರ್ಧ 'ರ' ಅಕ್ಷರವು ಸ್ವೀಕರಿಸಲ್ಪಟ್ಟಿತು. ಶಬ್ದದ ಆದಿಯಲ್ಲಿರುವ ಮತ್ತು ಕ್ರಿಯಾರೂಪದಲ್ಲಿರುವ 'ಪ' ಅಕ್ಷರವು 'ಹ' ಎಂದಾಯಿತು. ಪೂರ್ವದ ಜೈನ ಕವಿಗಳ ನಿಷ್ಕರ್ಷಿತ ಶೈಲಿಯಂತಿದ್ದ ವಾಕ್ಯ ರಚನೆ ಹಾಗೂ ಪ್ರಾಸಗಳ ನಿಯಮಗಳನ್ನು ಅನುಸರಿಸುವುದರಲ್ಲಿ ನಿರ್ಲಕ್ಷ್ಯತೆ ಕಂಡು ಬರುತ್ತದೆ. ಇಲ್ಲಿಯವರೆಗೆ ಅತ್ಯಂತ ಪ್ರಭಾವಶಾಲಿಯಾಗಿದ್ದ ಚಂಪೂರೂಪವು ಪಂಡಿತರಿಂದ ಉಪಯೋಗಿಸಲ್ಪಟ್ಟರೂ ಹೆಚ್ಚು ಹೆಚ್ಚಾಗಿ ನಿರ್ಲಕ್ಷಿಸಲ್ಪಟ್ಟಿತು."[೨೨] ಈ ಬದಲಾವಣೆಯನ್ನು ಗುರುತಿಸಬೇಕಾದರೆ ಸೂಕ್ಷ್ಮವಾದ ಅಧ್ಯಯನ ಇರಬೇಕಾಗುತ್ತದೆ. ಸಾಹಿತ್ಯದ ತಿಳುವಳಿಕೆ ಮಾತ್ರ ಅಲ್ಲ. ವ್ಯಾಕರಣ ಹಾಗೂ ಸಾಹಿತ್ಯದ ರೂಪಗಳ ತಿಳುವಳಿಕೆ ಇರಬೇಕಾಗುತ್ತದೆ. ಒಂದು ಸಾಹಿತ್ಯ ಚರಿತ್ರೆಯ ಶಕ್ತಿ ಇರುವುದು ಅದು ಇಂತಹ ಸೂಕ್ಷ್ಮ ಬದಲಾವಣೆಗಳನ್ನು ಗುರುತಿಸುವುದರಲ್ಲಿ. ಇಂತಹ ಪಲ್ಲಟವನ್ನು ಗುರುತಿಸಲು ಸಾಧ್ಯವಾಗುವ ಸಾಹಿತ್ಯ ಚರಿತ್ರೆ ಮಾತ್ರ ನಿಜವಾದ ಸಾಹಿತ್ಯ ಚರಿತ್ರೆಯಾಗಬಲ್ಲದು. ಕಾಲದ ವಿಭಜನೆಯನ್ನು ಯಾಂತ್ರಿಕವಾಗಿ ಮಾಡದೆ ಈ ಸೂಕ್ಷ್ಮ ಬದಲಾವಣೆಯನ್ನು ಗುರುತಿಸಲಾಗಿದೆ. ಇದೇ ರೀತಿ ಅವರು ಗುರುತಿಸುವ ಇನ್ನೊಂದು ಬದಲಾವಣೆ ಕ್ರಿ.ಶ. 1600ರ ಹೊತ್ತಿನ ವೈಷ್ಣವ ಸಾಹಿತ್ಯದಿಂದ ಸಂಭವಿಸಿದ್ದು. "ಹದಿನಾರನೆಯ ಶತಮಾನದಲ್ಲಿಯೇ, ವಿಶೇಷವಾಗಿ ವೈಷ್ಣವರ ಕಾವ್ಯ ರಚನೆಯಲ್ಲಿ ನಡುಗನ್ನಡದಿಂದ ಹೊಸಗನ್ನಡಕ್ಕೆ ತೊಡಗಿದ ಸಂಕ್ರಮಣವು ಕಂಡು ಬರುತ್ತದೆ. ಕೆಳಗೆ ತೋರಿಸಿದ ಈ ತರವಾದ ಅನೇಕ ಸಂಗತಿಗಳಲ್ಲಿ ಈ ಸಂಕ್ರಮಣ ಎದ್ದು ತೋರುತ್ತದೆ. ಪ್ರಾಚೀನವಾದ ಅನೇಕ ಕ್ರಿಯಾಪದಗಳು ಮತ್ತು ನಾಮಪದಗಳು ಬಳಕೆಯಿಂದ ವರ್ಜಿಸಲ್ಪಟ್ಟವು. 'ೞ' ಅಕ್ಷರವು ಅನುಪ್ರಾಸ ಮುಂತಾದ ಪ್ರಯೋಗಗಳಲ್ಲಿ ಇತರ ಅಕ್ಷರಗಳೊಂದಿಗೆ ಮಾತ್ರ ಕ್ವಚಿತ್ತಾಗಿ ಉಪಯೋಗವಾಗತೊಡಗಿತು. ಮತ್ತು ಕೊನೆಗೆ ಪೂರ್ತಿಯಾಗಿ ವರ್ಜಿಸಲ್ಪಟ್ಟಿತು. ಇಲ್ಲಿಯವರಗೆ ವ್ಯಂಜನಾಂತ್ಯವಾದ ಕ್ರಿಯಾಪದಗಳು, ನಾಮ ಪದಗಳು ಮತ್ತು ಅಂತ್ಯ ಪ್ರತ್ಯಯಗಳು ಉಚ್ಚರಿಸಲು ಸಹಾಯಕವಾಗುವಂತೆ 'ಉ' ಕಾರಾಂತ್ಯವನ್ನು ಹೊಂದಿದವು. ವರ್ತಮಾನ ಕಾಲದ ಸ್ವರೂಪವು ಬದಲಾಯಿತು. ಮತ್ತು ಒಂದು ಬಗೆಯ ಆಕಸ್ಮಿಕ ಭವಿಷ್ಯತ್ಕಾಲವು ಹೊಸದಾಗಿ ಪ್ರವೇಶಿಸಿತು"[೨೩] ಎನ್ನುತ್ತಾರೆ.

ಬಹುಶಃ ಕಿಟ್ಟೆಲ್ ತಮ್ಮ "ಗ್ರಾಮರ್ ಆಫ್ ಕನ್ನಡ ಲ್ಯಾಂಗ್ವೇಜ್" ಎಂಬ ಕೃತಿಯಲ್ಲಿ ನೀಡಿರುವ ಮುನ್ಸೂಚನೆಗಳಿಂದ ರೈಸ್ ಈ ನಿಲುವಿಗೆ ಬರಲು ಸಹಾಯಕವಾಯಿತು. ಆದರೆ ಇದು ಬಹು ಸೂಕ್ಷ್ಮ ತಿಳುವಳಿಕೆಯಿಂದ ಬಂದುದಾಗಿದೆ.

ವಚನಗಳ ಕಾಲಘಟ್ಟವನ್ನು ರೈಸ್ ಅವರಿಗೆ ಸೂಕ್ಷ್ಮವಾಗಿ ನೋಡಲು ಸಾಧ್ಯವಾಗಿಲ್ಲ ಎನಿಸುತ್ತದೆ. ಅವರ ಮಾತುಗಳನ್ನು ಗಮನಿಸಿದರೆ "ಲಿಂಗಾಯತ ಮತ ನಿಷ್ಠೆಯನ್ನು ವ್ಯಕ್ತಪಡಿಸುವ ಅನೇಕ ಕೃತಿಗಳನ್ನು ಬಸವಣ್ಣನು ರಚಿಸಿದ್ದಾನೆ"[೨೮] ಎನ್ನುವ ಸಂಗತಿ ಯಾವುದರ ಸಂಕೇತ? ವಚನ ಚಳವಳಿಯನ್ನು ಮುಖ್ಯವಾಗಿ ಅದರ ಧಾರ್ಮಿಕ ಭಾಗ ಮತ್ತು ಸಾಹಿತ್ಯಿಕ ಭಾಗ ಎಂದು ವಿಭಜಿಸಿಕೊಂಡು ನೋಡುವುದಾದರೆ ಅದರ ಸಾಹಿತ್ಯಿಕ ಭಾಗದ ವೈಶಿಷ್ಟ್ಯತೆಯನ್ನು ಈ ಚರಿತ್ರೆ ಮುಖ್ಯ ನೆಲೆಯಲ್ಲಿ ಗ್ರಹಿಸಲಿಲ್ಲ ಎನ್ನುವುದು ಇದರ ಮಿತಿ.

"ವಿಶ್ವದ ನಿಗೂಢತೆ ಅನಿತ್ಯತೆ ಹಾಗೂ ಚರ್ಮಚಕ್ಷುವಿಗೆ ಅತೀತವಾದ ಸತ್ಯಶೋಧನೆ ಇವುಗಳಿಂದ ದಿಕ್ಕು ತಪ್ಪಿದ ಪ್ರಾಮಾಣಿಕ ಆತ್ಮಗಳ ಮೊರೆತವು ಈ ಸಾಹಿತ್ಯದಲ್ಲಿ ಇದ್ದಾಗಲೂ ಆತ್ಮದ ಇಂಥ ಪ್ರಶ್ನೆಗಳಿಗೆ ಸಮಾಧಾನ ಸ್ಫೂರ್ತಿಗಳನ್ನು ಒದಗಿಸಬಲ್ಲ ಉತ್ತರಗಳು ಅಲ್ಲಿಲ್ಲ. ಆದರೆ ಈಗ ಒಂದು ನೂತನ ಉಜ್ಜೀವನಕಾರಿ ಶಕ್ತಿಯು ಈ ನಾಡನ್ನು ಪ್ರವೇಶಿಸಿದೆ. ಈ ಜನರು ತಾವು ಒಬ್ಬ ಸ್ವರ್ಗೀಯ ಪಿತನ ಮಕ್ಕಳೆಂಬ ಹೊಸ ಸತ್ಯವನ್ನು ಈಗ ಅರಿಯತೊಡಗಿದ್ದಾರೆ. ಜೀವನವು ಇನ್ನೂ ಉತ್ತಮತೆಯನ್ನು ಪಡೆಯುವುದಕ್ಕಾಗಿ ಇರುವ ಶಿಕ್ಷಣ ಮತ್ತು ಸಾರ್ಥಪರವಾದ ಮತೀಯತೆಗಿಂತಲೂ ಮಾನವೀಯ ಸೋದರತ್ವದ ಆತ್ಮಾರ್ಪಣೆಯ ಸೇವೆಯು ಉದಾತ್ತವಾದುದೆಂಬುದನ್ನು ಹಾಗೂ ಸಹಾನುಭೂತಿ ಹಾಗೂ ನ್ಯಾಯಗುಣಗಳ ಮೂಲಕವೇ ಯೋಗದ ನಿಜವಾದ ಗಮ್ಯಸ್ಥಾನವಾದ ದೇವರೊಂದಿಗಿನ ತಾದಾತ್ಮ್ಯವನ್ನು ಹೊಂದಲು ಸಾಧ್ಯ ಎಂಬ ವಿಚಾರಗಳನ್ನು ಈ ನಾಡವರು ಇತ್ತೀಚೆಗೆ ಅರಿಯತೊಡಗಿದ್ದಾರೆ. ಮತ್ತು ಇದರಿಂದಾಗಿಯೇ ಎಂದಿಗಿಂತಲೂ ಈಗ ಅವರ ಆತ್ಮವಿಶ್ವಾಸವು ಜಾಗೃತವಾಗತೊಡಗಿದೆ"[೨೯] ಎಂದು ರೈಸರು ತಮ್ಮ ಸಾಹಿತ್ಯ ಚರಿತ್ರೆಯಲ್ಲಿ ಹೇಳುತ್ತಾರೆ. ಸಾಹಿತ್ಯ ಚರಿತ್ರೆಯ ಮೂಲಕ ಏನನ್ನು ಹೇಳುವುದಕ್ಕೆ ಪ್ರಯತ್ನಿಸಲಾಗಿದೆ ಎಂಬುದರ ಬಗ್ಗೆ ಬಹಳ ಮುಖ್ಯ ಪ್ರಶ್ನೆಗಳು ಏಳುವ ಹಾಗೆ ಈ ಮೇಲಿನ ಸಾಲುಗಳು ಮಾಡುತ್ತವೆ. ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಅವಶ್ಯಕತೆ ಇದ್ದುದು ಅಂದಿನ ಬೌದ್ಧಿಕ ವ್ಯವಸ್ಥೆಗಿಂತಲೂ ಪ್ರಭುತ್ವ ಮತ್ತು ಧಾರ್ಮಿಕ ವ್ಯವಸ್ಥೆಗೆ ಎಂಬುದಕ್ಕೆ ಈ ಮಾತುಗಳು ಸ್ಪಷ್ಟ ನಿದರ್ಶನಗಳಾಗಿ ನಿಲ್ಲುತ್ತವೆ. ಸಾಹಿತ್ಯ ಚರಿತ್ರೆಯಂತಹ ಜ್ಞಾನ ಕ್ರಮಗಳ ಉತ್ಪಾದನೆಯ ಹಿಂದಿದ್ದ ಧೋರಣೆಗಳು ಈ ಮಾತಿನಲ್ಲಿ ವ್ಯಕ್ತವಾಗುತ್ತದೆ. ಆದರೆ ಈ ಸಂಗತಿಯನ್ನು ಈವರೆಗಿನ ವಿಮರ್ಶೆಗಳು ಗುರುತಿಸಿಲ್ಲ. ವಸಾಹತುಶಾಹಿಗೆ ಪೂರಕವಾದ ಒಂದು ನೆಲೆಯನ್ನು

ನಿರ್ಮಿಸಬೇಕಾಗಿದ್ದ ಅವಶ್ಯಕತೆ ಈ ಮಾತುಗಳಲ್ಲಿದೆ. ಈ ನೆಲದಲ್ಲಿ ಹೊಸತನವನ್ನು ತರಬಲ್ಲ ಒಂದು ಉಜ್ಜೀವನಕಾರಿ ಶಕ್ತಿಯಾಗಿ ತಾವು ಪ್ರವೇಶವನ್ನು ಮಾಡಿದ್ದೇವೆ ಎಂದು ತಮ್ಮ ಪ್ರವೇಶಕ್ಕೆ ಒಂದು ನ್ಯಾಯ ಸಮ್ಮತಿಕೆಯನ್ನು ತಾವೇ ಮಾಡಿಕೊಂಡಂತೆ ಇದೆ. ಈ 'ಉಜ್ಜೀವನಕಾರಿಶಕ್ತಿ' ಯಾವುದು? ಮಿಷನರಿಗಳೇ? ಅಥವಾ ಭಾರತದಲ್ಲಿ ನೆಲೆನಿಂತು ಆಡಳಿತದ ಚುಕ್ಕಾಣಿಯನ್ನು ಹಿಡಿಯುತ್ತಿದ್ದ ಬ್ರಿಟೀಷ್ ಆಡಳಿತವೆ? ಈ ಮೇಲೆ ಉಲ್ಲೇಖಿಸಿದಂತೆ 'ಜೀವನವು ಇನ್ನೂ ಉತ್ತಮತೆಯನ್ನು ಪಡೆಯುವುದಕ್ಕಾಗಿ ಇರುವ ಶಿಕ್ಷಣ ಮತ್ತು ಸ್ವಾರ್ಥಪರವಾದ ಮತೀಯತೆಗಿಂತಲೂ ಮಾನವೀಯ ಸೋದರತ್ವದ ಆತ್ಮಾರ್ಪಣೆಯ ಸೇವೆಯು ಉದಾತ್ತ' ಎಂದು ಹೇಳುವ ಈ ಮಾತುಗಳು ಯಾವುದನ್ನು ಕುರಿತು ಹೇಳುತ್ತಿದೆ? 'ಮಾನವೀಯ ಸೋದರತ್ವ' ಬ್ರಿಟೀಷ್ ಆಡಳಿತದಿಂದಲೇ ಅಥವಾ ಮಿಷನರಿ ಕಾರ್ಯದಿಂದಲೇ? 'ಸ್ವಾರ್ಥಪರ ಮತೀಯತೆ' ಎಂದರೆ ಇಲ್ಲಿನ ಜೈನ, ಬೌದ್ಧ, ಶೈವ, ವೈಷ್ಣವಗಳೆ? ಇದರ ಎದುರು ಪರ್ಯಾಯವಾಗಿ ನಿಲ್ಲಿಸುವ ಸೋದರತ್ವದ, ಮಾನವೀಯ ಸೇವೆ ಎಂದು ಯಾವುದನ್ನು ನಿರೂಪಿಸುತ್ತಾರೆ ಎಂಬುದು ಬಹಳ ಮುಖ್ಯ. ರೈಸ್ ಅವರ ತಂದೆ ಬಿ.ಎಚ್. ರೈಸ್ ಧರ್ಮ ಪ್ರಚಾರಕರಾಗಿಯೇ ಕರ್ನಾಟಕದಲ್ಲಿದ್ದವರು. ಇವರು ಮಿಷನ್ ಹೈಸ್ಕೂಲ್ ಅಧ್ಯಕ್ಷರಾಗಿಯೇ ಕಾರ್ಯನಿರ್ವಹಿಸಿದವರು. ಹೀಗಾಗಿ ಮೇಲಿನ ಈ ಮಾತುಗಳು ಒಬ್ಬ ವಿದ್ವಾಂಸನ ನೆಲೆಯಿಂದ ಬಂದುದಕ್ಕಿಂತಲೂ ಹೆಚ್ಚಾಗಿ ಮತ ಪ್ರಚಾರದ ಉತ್ಸಾಹದಲ್ಲಿದ್ದ ಒಬ್ಬ ಮಿಷನರಿಯ ಉತ್ಸಾಹದ ಮಾತುಗಳಂತೆ ಇದೆ. ಕನ್ನಡ ಸಾಹಿತ್ಯದ ಕುರಿತು ಇವರು ಹೇಳುವ ಮಾತು 'ಮಾನವನ ವಿಚಾರ ಸರಣಿಯ ಒಂದು ಅವಸ್ಥೆಗೆ ಚಾರಿತ್ರಿಕ ಪ್ರಮಾಣವಾಗಿ ಈ ಸಾಹಿತ್ಯವು ಬೆಲೆಯುಳ್ಳದ್ದಾಗಿದೆ' ಎಂದು ಹೇಳುವ ಮೂಲಕ ಕನ್ನಡ ಸಾಹಿತ್ಯದ ನಿಜವಾದ ಮೌಲ್ಯ ನಿರ್ಣಯವನ್ನು ಮಾಡುವಲ್ಲಿ ಎಡವಿದರು.

ಇ.ಪಿ. ರೈಸ್‌ರ 'A History of Kanarese Literature' ಎಂಬ ಕೃತಿ ಒಟ್ಟಿನಲ್ಲಿ ಕನ್ನಡ ಸಾಹಿತ್ಯವನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಅದಕ್ಕೆ ಒಂದು ಮೌಲ್ಯ ನಿರ್ಣಯವನ್ನು ಮಾಡುವ ಬಗೆಯದ್ದಾಗಿದೆ. ಅನೇಕ ಅಂಶಗಳಲ್ಲಿ ರೈಸ್ ಒಬ್ಬ ಯಶಸ್ವಿ ಸಾಹಿತ್ಯ ಚರಿತ್ರೆಕಾರನಾಗಿ ನಮ್ಮ ಗಮನಕ್ಕೆ ಬರುತ್ತಾರೆ. ಬಿ.ಎಂ. ಶ್ರೀಯವರು ಇ.ಪಿ. ರೈಸ್‌ರ ಈ ಕೃತಿಯನ್ನು ವಿಮರ್ಶಿಸುತ್ತಾ ಹೇಳುವ ಮಾತುಗಳು ರೈಸ್‌ರ ಕೊಡುಗೆಯನ್ನು ಸ್ಪಷ್ಟವಾಗಿ ಗುರುತಿಸುತ್ತಾರೆ. "We have great pleasure in welcoming Mr. Rice's Book as an attempt to give the Kannada People a real History of there Literature as distinguished from the catalogue and Cronology .... It is no mear compendium that we have

before us, the writer has avoided the easy method of enumerating a long series of little - known writers, .... and taken the study, a step forward - by treating the literature as product of Kannada people, in relation to their religious, Political and Cultural History"[೨೬] ಎನ್ನುವ ಮಾತನ್ನು ಎಂ. ಎಂ. ಕಲಬುರ್ಗಿಯವರು ಉಲ್ಲೇಖಿಸುತ್ತಾರೆ. ಸಾಹಿತ್ಯದ ಕುರಿತ ಜ್ಞಾನದ ಹಲವು ಕಾಲಘಟ್ಟಗಳ ನಡುವೆ ಉಂಟಾದ ಪಲ್ಲಟಗಳನ್ನು ಗುರುತಿಸುವ ಸೂಕ್ಷ್ಮತೆ ಇದ್ದ ಒಬ್ಬ ಚರಿತ್ರಕಾರ ಇ.ಪಿ. ರೈಸ್. ಕನ್ನಡದ ಮೂಲ ಜ್ಞಾನ ಪರಂಪರೆಯ ಜೊತೆ ಅನುಸಂಧಾನವನ್ನು ಮಾಡುತ್ತಲೇ, ಕನ್ನಡ ಕಾವ್ಯ ಪರಂಪರೆ ತಾನೇ ಕಟ್ಟಿಕೊಂಡಿದ್ದ ಚರಿತ್ರೆಯ ಸ್ವರೂಪವನ್ನು ಗುರುತಿಸುತ್ತಾರೆ. ತಾನು ಕಟ್ಟುವ ಈ ಸಾಹಿತ್ಯ ಚರಿತ್ರೆ ಪೂರ್ವ ಮತ್ತು ಪಶ್ಚಿಮದ ನಡುವೆ ಒಂದು ಸರಿಯಾದ ತಿಳುವಳಿಕೆಯನ್ನು ಮತ್ತು ಪರಸ್ಪರರಲ್ಲಿ ಉನ್ನತ ಸಹಾನುಭೂತಿಯನ್ನು ಮೂಡಿಸಲು ಅರ್ಪಿಸಿದ ಕಾಣಿಕೆ ಎಂಬ ವಿಶಾಲ ನೆಲೆ ಇದ್ದರೂ ಕೃತಿಯ ಕೊನೆಯ ಭಾಗ ಮಾತ್ರ ಕನ್ನಡದ ದೇಸಿ ಸತ್ವವನ್ನು ಅರಿಯಲಾರದೆ, ಕನ್ನಡದ ಉದ್ಧಾರಕ್ಕಾಗಿ ಉಜ್ಜೀವನಕಾರಿ ಶಕ್ತಿಯಾಗಿ ತಾವು ಪ್ರವೇಶವನ್ನು ಮಾಡಿದ್ದೇವೆ ಎಂಬ ಧೋರಣೆ ಹೇಗೆ ಬಂದಿತು ಎಂಬುದನ್ನು ಊಹಿಸಲಾಗದು. ಹೀಗಿದ್ದರೂ ಒಟ್ಟು ಕನ್ನಡ ಸಾಹಿತ್ಯದ ಚರಿತ್ರೆಯ ಬೆಳವಣಿಗೆಯಲ್ಲಿ ಈ ಕೃತಿಯು ಉಂಟು ಮಾಡಿದ ಪರಿಣಾಮ ಅಗಾಧವಾದದ್ದು. ಏಕೆಂದರೆ ಬಹಳ ಶಾಸ್ತ್ರೀಯವಾಗಿ ಕನ್ನಡದಲ್ಲಿ ಬಂದ ಸಾಹಿತ್ಯ ಚರಿತ್ರೆಯ ಕೃತಿ ಇದು.

## ಸಂದರ್ಭ ಸೂಚಿ


೧. ಡಾ। ಶ್ರೀನಿವಾಸ ಹಾವನೂರ 'ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ, ಹನಿಗವಿತೆ, ಕಂಪ್ಯೂಟರ್.. ಇತ್ಯಾದಿ' ಅನನ್ಯ ಪ್ರಕಾಶನ, ಮೈಸೂರು 1982, ಪುಟ 20

೨. ಅದೇ ...... ಪುಟ 41

೩. ಡಾ। ಶ್ರೀನಿವಾಸ ಹಾವನೂರ 'ಹೊಸಗನ್ನಡದ ಅರುಣೋದಯ' ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. 1974, ಪುಟ 99

೪. ಫ್ಲೀಟ್: Indian Antiquary, vol . 24, 1895 page 84

೫. F. KITTEL 'Old Canarese Literature' Indian Evangical Review 1874, page 64

೬. ಅದೇ ...... ಪುಟ 67

೭. ಅದೇ ...... ಪುಟ 64

೮. ಅದೇ ...... ಪುಟ 65

೯. ಅದೇ ...... ಪುಟ 69

೧೦. ಡಾ। ಎಂ.ಎಂ. ಕಲಬುರ್ಗಿ, ಮಾರ್ಗ ಸಂಪುಟ – ೧, ನರೇಶ್ ಅಂಡ್ ಕಂಪನಿ, ಬೆಂಗಳೂರು, 1988, ಪುಟ 460

೧೧. F. KITTEL, An Essay on Canarese Literature ನಾಗವರ್ಮನ ಕನ್ನಡ ಛಂದಸ್ಸು, ಪುಟ XLI

೧೨. ಅದೇ ..... ಪುಟ LVIII

೧೩. ಅದೇ ..... ಪುಟ LVIII

೧೪. ಡಾ। ಎಂ. ಎಂ. ಕಲಬುರ್ಗಿ, ಮಾರ್ಗ ಸಂಪುಟ – ೧, ನರೇಶ್ ಅಂಡ್ ಕಂಪನಿ, ಬೆಂಗಳೂರು, 1988, ಪುಟ 463.

೧೫. F. KITTEL, An Essay on Canarese Literature ನಾಗವರ್ಮನ ಕನ್ನಡ ಛಂದಸ್ಸು, ಪುಟ LXXXI

೧೬. ಅದೇ ..... ಪುಟ LXXXI

೧೭. E.P. Rice: (ಅನು: ಸಂಗಮನಾಥ ಜಿ. ಹಂಡಿ & ಕುಮಾರಿ ಪೌಲಿನ ನಂದಗಾವ) ಕನ್ನಡ ಸಾಹಿತ್ಯ ಚರಿತ್ರೆ ಶರತ್ ಪ್ರಕಾಶನ, ಮೈಸೂರು 1975, ಪುಟ ix

೧೮. ಅದೇ ..... ಪುಟ ix

೧೯. ಅದೇ ..... ಪುಟ VIII

೨೦. ಅದೇ ..... ಪುಟ ix

೨೧. ಅದೇ ..... ಪುಟ 6

೨೨. ಅದೇ ..... ಪುಟ 68

೨೩. ಅದೇ ..... ಪುಟ 93

೨೪. ಅದೇ ..... ಪುಟ 61

೨೫. ಅದೇ ..... ಪುಟ 137

೨೬. ಡಾ। ಎಂ. ಎಂ. ಕಲಬುರ್ಗಿ, ಮಾರ್ಗ ಸಂಪುಟ – ೧, ನರೇಶ್ ಅಂಡ್ ಕಂಪನಿ, ಬೆಂಗಳೂರು, 1988, ಪುಟ 630.

# ಅಧ್ಯಾಯ ಐದು

## ೫.೦ ದೇಸಿ ಪಂಡಿತರ ಸಾಹಿತ್ಯ ಚರಿತ್ರೆ:

೫.೧ ಪ್ರವೇಶ

೫.೨ ಆರ್. ನರಸಿಂಹಾಚಾರ್ಯ – ಕಾರ್ಯದ ನೆಲೆ

೫.೩ ಕರ್ನಾಟಕ ಕವಿ ಚರಿತೆ– ದೇಸಿ ಚರಿತೆಯ ರೂಪ

೫.೪ ಎ. ವೆಂಕಟ ಸುಬ್ಬಯ್ಯ – ವಿದ್ವತ್ ಪ್ರಪಂಚದ ಕೊಂಡಿ

೫.೫ ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ – ಕವಿ ಚರಿತೆಯ ಜೊತೆ ಮುಖಾಮುಖಿ.

# ೫. ದೇಸಿ ಪಂಡಿತರ ಸಾಹಿತ್ಯ ಚರಿತ್ರೆ

## ೫.೧. ಪ್ರವೇಶ

ಕನ್ನಡದ ನೆಲದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ಕೆಲಸವನ್ನು ಒಂದು ಶಾಸ್ತ್ರೀಯ ಚೌಕಟ್ಟಿನಲ್ಲಿ ಪ್ರಾರಂಭಿಸಿದವರು ಮಿಷನರಿಗಳಾದರೂ ಅದೇ ಸಮಯದಲ್ಲಿ ಇಲ್ಲಿನ ಸ್ಥಳೀಯ ಪಂಡಿತ ಪರಂಪರೆಯೊಂದು ಈ ಕಾರ್ಯದ ಜೊತೆ ಕೂಡಿಕೊಂಡದ್ದನ್ನು ಕಾಣುತ್ತೇವೆ. ಎಫ್. ಕಿಟ್ಟೆಲ್, ಇ.ಪಿ. ರೈಸ್ ತಾವು ಸಾಹಿತ್ಯವನ್ನು ಅಧ್ಯಯನ ಮಾಡಿ ಒಂದು ಚರಿತ್ರೆಯನ್ನು, ಶಬ್ಧಕೋಶವನ್ನು ಕಟ್ಟಬೇಕಾದರೆ ಅದಕ್ಕೆ ಸ್ಥಳೀಯ ಪಂಡಿತರ ಸಹಕಾರವನ್ನು ಪಡೆದುಕೊಂಡದ್ದನ್ನು ಸ್ಮರಿಸಿಕೊಂಡಿದ್ದಾರೆ. ಮಿಷನರಿ ವಿದ್ವಾಂಸರ ಕಾರ್ಯದ ಜೊತೆ ಜೊತೆಯಲ್ಲಿಯೇ ಈ ಪಂಡಿತ ಪರಂಪರೆ ಬೆಳೆದುಕೊಂಡು ಬಂದುದು ವಿಶೇಷ. ಎಫ್. ಕಿಟ್ಟೆಲ್‌ರ ಸಾಹಿತ್ಯ ಚರಿತ್ರೆಯ ಪ್ರಬಂಧಗಳು ಬಂದ ನಂತರ ಆರ್.ನರಸಿಂಹಾಚಾರ್ಯರ ಕವಿಚರಿತೆಯ ಮೊದಲ ಸಂಪುಟ ಬಂದಿತು. ಈ ಮೊದಲ ಸಂಪುಟ ಬಂದ ನಂತರ ಇ.ಪಿ. ರೈಸ್‌ರ 'A History of Kanarese Literature' ಕೃತಿ ಬಂದಿತು. ಆರ್. ನರಸಿಂಹಾಚಾರ್ಯರ ಎರಡನೆಯ ಸಂಪುಟ ಬಂದಾಗ ಡಾ।ಎ.ವೆಂಕಟಸುಬ್ಬಯ್ಯನವರ ಪ್ರಬಂಧಗಳು 'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ' ಬಂದಿತು. ಹೀಗಾಗಿ ಕನ್ನಡದ ಮಟ್ಟಿಗೆ ಈ ಸಾಹಿತ್ಯ ಚರಿತ್ರೆಯ ಕಟ್ಟುವಿಕೆ ಬಹಳ ಪ್ರತ್ಯೇಕವಾಗಿ ನಿಂತು ನಡೆದ ಕೆಲಸವಲ್ಲ. ಒಬ್ಬೊಬ್ಬರ ಕೆಲಸದ ನಡುವೆ ಪರಸ್ಪರ ಒಂದು ಬಗೆಯ ಕೊಡು ಕೊಳ್ಳುವಿಕೆ ಇದೆ. ಒಬ್ಬರ ಕೆಲಸಕ್ಕೆ ಇನ್ನೊಬ್ಬರು ನೀಡಿದ ಮನ್ನಣೆ ಇದೆ. ಹಾಗೆಯೇ ಸೂಕ್ಷ್ಮ ಪ್ರತಿಕ್ರಿಯೆಯೂ ಇದೆ. ತಾನು ಒಳಗೊಳ್ಳುವ ಮತ್ತು ಪ್ರತಿಕ್ರಿಯಿಸುವ ಮಾದರಿಯಲ್ಲಿ ಕನ್ನಡದ ಸಾಹಿತ್ಯ ಚರಿತ್ರೆಯ ಕೆಲಸ ನಡೆದಿದೆ. ಕನ್ನಡ ಸಾಹಿತ್ಯ ಚರಿತ್ರೆಯ ಮೂಲಧಾತು ಈ ಬಗೆಯ ಸಂಯೋಗದಲ್ಲಿದೆ. ಕೆಲವು ಸಂದರ್ಭದಲ್ಲಿ ಸಂಯೋಗ ಸಂಘರ್ಷವಾದದ್ದೂ ಇದೆ. ಇನ್ನು ಕೆಲವು ಸಲ ಸಂವಾದವಾಗಿ ಅನುಸಂಧಾನವನ್ನು ಮಾಡಿದ್ದೂ ಇದೆ. ಈ ಪ್ರಕ್ರಿಯೆಯನ್ನು ಮುಂದೆ ವಿವರಿಸಿಕೊಳ್ಳಲಾಗುತ್ತದೆ.

ದೇಶೀಯ ಪರಂಪರೆಯೊಂದು ಈ ಸಾಹಿತ್ಯ ಚರಿತ್ರೆ ಎಂಬ ಜ್ಞಾನವನ್ನು ಕಟ್ಟುವಲ್ಲಿ ತೊಡಗಿಕೊಂಡಿದ್ದರಿಂದ ಸಾಹಿತ್ಯ ಚರಿತ್ರೆಗೆ ಈ ವಿಸ್ತಾರ ದೊರೆಯಿತು. ಪಶ್ಚಿಮದ ಶಿಸ್ತನ್ನು ಅಳವಡಿಸಿಕೊಂಡಿದ್ದರಿಂದ ಕನ್ನಡದ ಮಟ್ಟಿಗೆ ಒಂದು ತಿರುವನ್ನು ತಂದುಕೊಟ್ಟಿತು. ಏಕೆಂದರೆ, ಕಿಟ್ಟೆಲ್ ಲಭ್ಯವಾದ ಸಾಮಾಗ್ರಿಗಳ ಸೀಮಿತತೆಯಿಂದಾಗಿ ಸಾಹಿತ್ಯ ಚರಿತ್ರೆಗೆ ಒಂದು ದಿಕ್ಕನ್ನಷ್ಟೇ ತೋರಿಸುವುದು ಸಾಧ್ಯವಾಯಿತು. ಹೀಗಾಗಿ ಸುಮಾರು 60 ಪುಟಗಳ ಸಾಹಿತ್ಯ ಚರಿತ್ರೆಯನ್ನಷ್ಟೇ ಅವರು ನೀಡುವುದಕ್ಕೆ ಸಾಧ್ಯವಾಯಿತು. ಇ.ಪಿ. ರೈಸ್ ಸಾಮಾಗ್ರಿಗಳ ಲಭ್ಯತೆ ಇದ್ದರೂ 'ಅಷ್ಟೊಂದು

ಪ್ರಮುಖರಲ್ಲದ ಎಲ್ಲ ಕವಿಗಳನ್ನು ಪಟ್ಟಿ ಮಾಡಿದರೆ ಓದುಗನಿಗೆ ಬೇಸರವಾಗುತ್ತದೆ' ಎಂಬ ನೆಲೆಯಿಂದ ಮುಖ್ಯವಾದುವುಗಳನ್ನು ಆಯ್ದು ಕಟ್ಟಿದರು. ಆದರೆ ಮುಂದೆ ಆರ್.ನರಸಿಂಹಾಚಾರ್ಯರು ಸುಮಾರು 1140ಕ್ಕಿಂತಲೂ ಹೆಚ್ಚು ಕವಿಗಳನ್ನು ಹೆಸರಿಸಿ ಸಾಧ್ಯವಾದಷ್ಟು ಅವರ ಕಾಲ, ಕೃತಿಗಳ ವಿವರಗಳನ್ನು ನೀಡಿದ್ದು ಮತ್ತು ಇಷ್ಟು ವಿಸ್ತಾರವಾಗಿ ನಿರೂಪಿಸಿದಾಗಲೂ ಯಾವ ಬೇಸರವೂ ಇಲ್ಲದಿರುವುದೇ ಅವರ ದೇಸೀತನ ಎನ್ನಬಹುದು. ಇದಕ್ಕೆ ಪ್ರತಿಕ್ರಿಯೆಯಾಗಿ ಬಂದದ್ದು ಎ. ವೆಂಕಟ ಸುಬ್ಬಯ್ಯನವರ 'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ' ಎಂಬ ಬರವಣಿಗೆ.

ಕನ್ನಡ ಸಾಹಿತ್ಯ ಚರಿತ್ರೆ ರೂಪವನ್ನು ಪಡೆದದ್ದು ಮಿಷನರಿಗಳಿಂದಾದರೂ ಅದು ವಿಸ್ತಾರವನ್ನು ಪಡೆದದ್ದು ದೇಸೀಯ ವಿದ್ವಾಂಸರಿಂದ. ಈ ಅಧ್ಯಾಯದಲ್ಲಿ ಆರ್. ನರಸಿಂಹಾಚಾರ್ಯ ಮತ್ತು ಎ. ವೆಂಕಟಸುಬ್ಬಯ್ಯನವರು ಚರಿತ್ರೆಯನ್ನು ಕಟ್ಟುವ ಮಾದರಿಯನ್ನು ಮುಖಾಮುಖಿಯಾಗಿಸಿ ವಿಶ್ಲೇಷಿಸಲಾಗುವುದು.

**೫.೨ ಆರ್. ನರಸಿಂಹಾಚಾರ್ಯ ಜೀವನ ವಿಚಾರ:**

ಕ್ರಿ.ಶ. 1860ರಲ್ಲಿ ಜನಿಸಿದ ಆರ್. ನರಸಿಂಹಾಚಾರ್ಯರು, ವಂಶಪಾರಂಪರ್ಯವಾಗಿ ಬಂದ ಸಂಸ್ಕೃತ ವಿದ್ಯಾಭ್ಯಾಸವನ್ನೂ, ಆಧುನಿಕತೆಯ ಪ್ರವೇಶದಿಂದ ಸಿಕ್ಕಿದ ಇಂಗ್ಲಿಷ್ ಶಿಕ್ಷಣವನ್ನು ಪಡೆಯಲು ಶಕ್ತರಾಗಿದ್ದರು. ಬಿ.ಎ. ಪದವಿಯನ್ನು ಪಡೆದ ಇವರು ಅಧ್ಯಾಪಕರಾಗಿ ಸೇವೆಯನ್ನು ಸಲ್ಲಿಸಿದವರು. 1893ರಲ್ಲಿ ಮೈಸೂರಿನಲ್ಲಿರುವ ಮಹಾರಾಜರ ಕಾಲೇಜಿಗೆ ಅಧ್ಯಾಪಕರಾಗಿ ಸೇರಿಕೊಂಡ ನಂತರದಲ್ಲಿ ಇವರ ಅಪಾರ ವಿದ್ವತ್ ಬೆಳಕಿಗೆ ಬರಲಾರಂಭಿಸಿತು. ಕನ್ನಡ ಮತ್ತು ತಮಿಳು ಭಾಷೆಗಳನ್ನು ಅಭ್ಯಾಸ ಮಾಡಿ ಎಂ.ಎ. ಪದವಿಯನ್ನೂ ಪಡೆದುಕೊಂಡರು. ದ್ರಾವಿಡ ಭಾಷಾ ಸಾಹಿತ್ಯದಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಎಂ.ಎ. ಪದವಿ ಪಡೆದ ಮೊದಲಿಗರಿವರು. ಬಳಿಕ ಕೆಲಕಾಲ ಮೈಸೂರು ಸರಕಾರದ ಕನ್ನಡ ಭಾಷಾಂತರಕಾರರಾಗಿ ಕೆಲಸ ಮಾಡಿದ ಇವರನ್ನು ಮೈಸೂರಿನ ಪ್ರಾಕ್ತನ ಶಾಖೆಗೆ ಬಿ.ಎಲ್. ರೈಸ್ ಅವರು ತಮ್ಮ ಸಹಾಯಕರನ್ನಾಗಿ ಮಾಡಿಕೊಂಡರು. ಬಿ.ಎಲ್. ರೈಸ್‌ರ ಅಪಾರ ವಿದ್ವತ್, ಸಂಶೋಧನಾ ಮಾರ್ಗದಿಂದ ಪ್ರೇರಣೆಯನ್ನು ಪಡೆದು ಮುನ್ನಡೆದ ಇವರು ಬಿ.ಎಲ್. ರೈಸ್ ನಿವೃತ್ತರಾದಾಗ ಪ್ರಾಕ್ತನ ಶಾಖೆಗೆ ಡೈರೆಕ್ಟರಾಗಿ ನೇಮಕಗೊಂಡರು. ನರಸಿಂಹಾಚಾರ್ಯರ ಸಂಶೋಧನಾ ಕಾರ್ಯವನ್ನು ಮೆಚ್ಚಿ ನಾಲ್ವಡಿ ಕೃಷ್ಣರಾಜ ಒಡೆಯರು 1913ರಲ್ಲಿ 'ಪ್ರಾಕ್ತನ ವಿಮರ್ಶ ವಿಚಕ್ಷಣ' ಎಂಬ ಬಿರುದನ್ನು ನೀಡಿದರು. ಅಂದಿನ ಬ್ರಿಟಿಷ್ ಸರ್ಕಾರ ಇವರಿಗೆ 'ರಾವ್ ಬಹದ್ದೂರ್' ಮತ್ತು 'ಮಹಮಹೋಪಾಧ್ಯಾಯ' ಎಂಬ ಬಿರುದುಗಳನ್ನು ನೀಡಿತು.

ಕರ್ನಾಟಕ ಕವಿಚರಿತೆಯ ಮೂರು ಸಂಪುಟಗಳು ಆರ್. ನರಸಿಂಹಾಚಾರ್ಯರ ಕೀರ್ತಿಗೆ ಸಾಕ್ಷಿಯಾಗಿದೆ. ಕವಿಚರಿತೆಯ ಮೂರು ಸಂಪುಟಗಳನ್ನು,

ಪ್ರಥಮ ಸಂಪುಟ (14ನೇ ಶತಮಾನದ ಕೊನೆಯವರೆಗೆ) 1907

ದ್ವಿತೀಯ ಸಂಪುಟ (17ನೇ ಶತಮಾನದ ಕೊನೆಯವರೆಗೆ) 1919

ತೃತೀಯ ಸಂಪುಟ (18 ಮತ್ತು 19ನೇ ಶತಮಾನಗಳು) 1929 ರಲ್ಲಿ ಇವರು ಪ್ರಕಟಿಸಿದರು. ಇಷ್ಟೇ ಅಲ್ಲದೆ, ಇವರು ಇನ್ನೂ ಅನೇಕ ಬಹು ಮುಖ್ಯ ಬರಹಗಳನ್ನು ಬರೆದಿದ್ದಾರೆ.

1. ಶ್ರವಣಬೆಳಗೊಳದ ಶಾಸನಗಳು
2. ಗಂಗರ ಚರಿತ್ರೆ
3. ಕಾವ್ಯಾವಲೋಕನ, ಭಾಷಾಭೂಷಣ ಮತ್ತು ಶಬ್ಧಾನುಶಾಸನಗಳ ಸಂಪಾದನೆ
4. ಶಾಸನ ಪದ್ಯ ಮಂಜರಿ
5. History of Kannada Literature
6. History of Kannada Language .... ಇತ್ಯಾದಿ

ಭಾಮಹನ ಕಾವ್ಯಾಲಂಕಾರವನ್ನು ಕುರಿತು ಮೊದಲು ಪರಿಚಯ ಮಾಡಿಕೊಟ್ಟ ಹಿರಿಮೆ ಇವರದು. ಕನ್ನಡ ಸಾಹಿತ್ಯ ಚರಿತ್ರೆಯ ಕುರಿತು ಮಾತನಾಡುವಾಗ ಆರ್. ನರಸಿಂಹಾಚಾರ್ಯರ 'ಕರ್ನಾಟಕ ಕವಿಚರಿತೆ' ಎಂಬ ಮೂರು ಮೇರು ಸಂಪುಟಗಳು ಅದ್ವಿತೀಯವಾಗಿ ನಿಲ್ಲುತ್ತವೆ. ಇವರ ಕವಿಚರಿತೆಯ ನಂತರ ಕನ್ನಡದ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದಂತೆ ಅನೇಕ ಹೊಸ ಶೋಧಗಳು ನಡೆದಿದೆ. ಆದರೆ ಇವರು ಕವಿಚರಿತೆಯಲ್ಲಿ ಸಂಗ್ರಹಿಸಿಕೊಟ್ಟ ಆಕರಗಳನ್ನು ಬಿಟ್ಟು ಕನ್ನಡದ ಸಾಹಿತ್ಯ ಚರಿತ್ರೆಯನ್ನು ಕಟ್ಟಲಾಗದು.

**೩.೩. 'ಕರ್ನಾಟಕ ಕವಿಚರಿತೆ' ದೇಸಿ ಚರಿತೆಯ ರೂಪ**

ಸಾಹಿತ್ಯ ಚರಿತ್ರೆ ಎಂಬ ವಾಙ್ಮಯ ನಿರ್ಮಿತಿಯು ಕನ್ನಡದ ಮಟ್ಟಿಗೆ ಸರಿಯಾದ ರೂಪವನ್ನು ಪಡೆದುದು ಕರ್ನಾಟಕ ಕವಿಚರಿತೆಯ ಮೂಲಕ. ಕರ್ನಾಟಕ ಕವಿಚರಿತೆ ಕನ್ನಡದ ಸಮಗ್ರ ಸಾಹಿತ್ಯ ಸಂದರ್ಭವನ್ನು ಗ್ರಹಿಸಿ ಅದಕ್ಕೊಂದು ಚೌಕಟ್ಟನ್ನು ರೂಪಿಸಿತು. ಇದು ಕನ್ನಡ ವಾಙ್ಮಯ ಪರಂಪರೆಯ ಪ್ರಾಚೀನತೆಯನ್ನು ಸಮಕಾಲೀನ ಸಂದರ್ಭದಲ್ಲಿಟ್ಟು ಪುನಾರಚಿಸಿದ ಮಾದರಿ. ಪಾಶ್ಚಾತ್ಯರು ಈ ಮೊದಲು ಕೈಗೊಂಡ ಕನ್ನಡ ಸಾಹಿತ್ಯ ಚರಿತ್ರೆಯ, ಭಾಷೆಯ ಗ್ರಂಥ ಸಂಪಾದನೆಯ ಕ್ಷೇತ್ರದಲ್ಲಿ ನಡೆಸಿದ ಕಾರ್ಯವು ಯಾವತ್ತೂ ಮಹತ್ತನ್ನು ಹೊಂದಿದೆ. ಪಾಶ್ಚಾತ್ಯರು ನಡೆಸಿದ ಕೆಲಸವನ್ನು ಮುಂದೆ ಕನ್ನಡಿಗರು ಹೊಸ ನೆಲೆಯಲ್ಲಿ ಗ್ರಹಿಸಿ ಅದನ್ನು ವ್ಯಾಖ್ಯಾನಿಸಿಕೊಂಡಿದ್ದರಿಂದ ಸಾಕಷ್ಟು ಉಪಯೋಗಗಳು ಆಗಿವೆ.

ವಸಾಹತುಶಾಹಿ ಸಂದರ್ಭದಲ್ಲಿ ಸಾಹಿತ್ಯ ಚರಿತ್ರೆಯ ಪಾತ್ರದ ವಿಶ್ಲೇಷಣೆ, ವಸಾಹತಿನ ಕಾರಣದಿಂದ ತೆರೆದುಕೊಂಡ ಹೊಸ ಜಗತ್ತಿನೊಂದಿಗೆ ಮುಖಾಮುಖಿಯಾದಾಗ 'ಸ್ಥಳೀಯ' ಅವಕಾಶ ಮತ್ತು ಕಾಲಗಳ ಕಲ್ಪನೆಗಳು ಕ್ರಮೇಣ ಬದಲಾದವು. ತನ್ನ ರಾಜಕೀಯ ಹಿರಿತನದ ಅನಿಸಿಕೆಯನ್ನು ಸಾಧಿಸಿ ತೋರಿಸಲು ಮತ್ತು ತನ್ನ ಸ್ವಂತದ ಬೌದ್ಧಿಕ ಶಕ್ತಿಯ ಕುರಿತು ಭರವಸೆಯನ್ನು ಹೆಚ್ಚಿಸಿಕೊಳ್ಳುವುದು ಅವಶ್ಯಕತೆಯಾಗಿತ್ತು. ವಸಾಹತಿನ 'ಉನ್ನತಿಕೆ'ಯನ್ನು ತನ್ನ ಸ್ಥಳೀಯ 'ಹಿರಿತನ'ದ ಮೂಲಕ ಅಥೆಂಟಿಕ್ ಆಗಿ ಎದುರಿಸಬಹುದು ಮತ್ತು ತನ್ನೊಳಗೆ ಹುದುಗಿರುವ ತನ್ನದೇ ಆದ ಬೌದ್ಧಿಕ ಶಕ್ತಿಯನ್ನು ಕಾಲಾನುಕ್ರಮಣಿಕೆಯ ಒಳಗೆ ನಿರೂಪಿಸುವ ತುರ್ತು ದೇಶೀಯ ಸಾಹಿತ್ಯ ಚರಿತ್ರೆಕಾರನಿಗೆ ಇತ್ತು. ತನ್ನ ಚಿಂತನೆಯನ್ನು 'ಐತಿಹಾಸಿಕ'ಗೊಳಿಸುವಲ್ಲಿ ಇದು ಕ್ರಿಯಾತ್ಮಕವಾಯಿತು. ತನ್ನ ನಾಡು ದೂರದ ಪ್ರದೇಶಗಳ ಗಡಿಯನ್ನು ಮುಟ್ಟಿರುವ ಹಾಗೂ ಈಗ ಗೊತ್ತಿರುವ ಕಾಲಿಕ ದಿಗಂತಗಳನ್ನು ಮೀರುವ ವಿಚಾರಗಳು ಇಲ್ಲಿ 'ಚರಿತ್ರೆ'ಯ ರೂಪಕ್ಕೆ ಇಳಿದವು.

ಮೂರು ಸಂಪುಟಗಳಷ್ಟು ದೀರ್ಘವಾಗಿ ಒಂದು ಭಾಷೆಯ ಸಾಹಿತ್ಯಿಕ ಚರಿತ್ರೆಯನ್ನು ಗುರುತಿಸುವ ಕೆಲಸದ ಹಿಂದೆ ಒಂದು ಸ್ಥಳೀಯ ಐಡೆಂಟಿಟಿಯನ್ನು (ತನ್ನತನವನ್ನು) ರೂಪಿಸುವ ಮನೋಧರ್ಮ ಇದೆ. ಅದು ಕೇವಲ ಸಾಹಿತ್ಯದ ಒಂದು ಪರಂಪರೆಯನ್ನು ಕೇವಲ ಕಾಲಾನುಕ್ರಮಣಿಕೆಯ ಜಡ ನಿರೂಪಣೆಯಾಗದೆ ಆ ಕಾಲದ ಪಶ್ಚಿಮದ ಮಾದರಿಗಳನ್ನು ಒಳಗೊಂಡೂ ಅದನ್ನು ಮೀರುವ ಕ್ರಮದ್ದು. ಒಳಗೊಳ್ಳುವುದು ಅದರ ನಿರೂಪಣೆಯ ಕ್ರಮದ ಚೌಕಟ್ಟಿನಲ್ಲಿ ಮೀರುವುದು ಸಾಹಿತ್ಯ ಚರಿತ್ರೆಯ ವಿಸ್ತಾರದಲ್ಲಿ. ಹೀಗೆ ವಿಸ್ತಾರವಾಗಿ ಮತ್ತು ಬಹು ಸಮಗ್ರವಾಗಿ ಹೇಳುವ ಕ್ರಮದಲ್ಲೇ ಒಂದು ದೇಸೀಯ ಪ್ರಜ್ಞೆಯು ಜಾಗೃತವಾಗಿದೆ. ಕವಿಚರಿತೆ ವ್ಯಷ್ಟಿ ನೆಲೆಯಲ್ಲಿ ಸಂಕ್ಷಿಪ್ತ ಇರಬಹುದು. ಆದರೆ ಸಮಷ್ಟಿಯ ನೆಲೆಯಲ್ಲಿ ಬಹು ವಿಸ್ತಾರವಾದದ್ದು.

ಕರ್ನಾಟಕ ಕವಿಚರಿತೆಯ ದೇಶೀಯ ಸ್ವರೂಪವನ್ನು ಗುರುತಿಸಲು ಸಾಧ್ಯವಾಗಬಹುದಾದ ಕೆಲವು ಅಂಶಗಳನ್ನು ಇಲ್ಲಿ ನಿರೂಪಿಸಲಾಗುತ್ತದೆ. ಕವಿಚರಿತೆಕಾರನ ಬರವಣಿಗೆಯ ವಿನ್ಯಾಸ ಬಳಸಿಕೊಂಡ ಭಾಷೆಯ ಸ್ವರೂಪದಲ್ಲಿ ಇದನ್ನು ಕಾಣಬಹುದು. ಪ್ರಥಮ ಸಂಪುಟದ ಅವತರಣಿಕೆಯಲ್ಲಿ 'ದ್ರಾವಿಡ ಭಾಷೆಗಳ ಪ್ರಾಚೀನತೆ', 'ಕನ್ನಡ ಭಾಷೆಯ ಪ್ರಚಾರದ ಹಿಂದಣ ಮತ್ತು ಈಗಿನ ಪ್ರದೇಶಗಳು', 'ಕರ್ನಾಟ ಎಂಬ ಶಬ್ದದ ಪೂರ್ವ ಪ್ರಯೋಗಗಳು', 'ಕನ್ನಡ ನಾಡಿನ ಪ್ರಾಚೀನತೆ', 'ಕನ್ನಡ ಭಾಷೆಯ ಪ್ರಾಚೀನತೆ' ಎಂಬ ಉಪಶೀರ್ಷಿಕೆಗಳು, ದ್ವಿತೀಯ ಸಂಪುಟದಲ್ಲಿ ಮತ್ತೆ 'ಕನ್ನಡ ನಾಡಿನ ಪ್ರಾಚೀನತೆ', 'ಕನ್ನಡ ನಾಡಿನ ಮಹಿಮೆ', 'ಕನ್ನಡ ನುಡಿಯ ಪ್ರಾಚೀನತೆ' ಎಂಬ ಉಪಶೀರ್ಷಿಕೆ, ತೃತೀಯ ಸಂಪುಟದ 'ಸುಮಾರು ಸಾವಿರ ವರ್ಷಕ್ಕೆ ಹಿಂದೆ ಕನ್ನಡದ ವ್ಯಾಪ್ತಿ' 'ಕನ್ನಡಿಗರ ನಾಗರೀಕತೆ' ಎಂಬ ಉಪಶೀರ್ಷಿಕೆಗಳ ಪ್ರಯೋಗದ ಹಿಂದಿನ ತಾರ್ಕಿಕತೆಯನ್ನು ಗಮನಿಸಬೇಕು. ಇಲ್ಲಿ ಮತ್ತೆ ಮತ್ತೆ ಪ್ರಾಚೀನತೆಯನ್ನು ಹುಡುಕುವ, ಅದನ್ನು ಗುರುತಿಸುವ ಬಗೆ

ಇದೆ. ಈ ವಿನ್ಯಾಸವೇ ಇದನ್ನು ಈ ಮೊದಲಿನ ಕಿಟ್ಟೆಲ್, ರೈಸ್‌ರ ಬರವಣಿಗೆಯ ಕ್ರಮಕ್ಕಿಂತ ಬಹು ಭಿನ್ನವಾಗಿ ತಂದು ನಿಲ್ಲಿಸುವುದು. ಪ್ರಾಚೀನತೆಯ ಶೋಧ ತನ್ನ ನಾಡಿನ ಗುರುತನ್ನೇ ಗತದ ಬಹು ವೈಭವದಲ್ಲಿ ಜೋಡಿಸಿಕೊಳ್ಳುವ ನೆಲೆಯದ್ದಾಗಿರುತ್ತದೆ. ಮೊದಲ ಸಂಪುಟದಲ್ಲಿ ಕೆಲವೇ ಸಾಲುಗಳಲ್ಲಿದ್ದ ಕನ್ನಡ ನಾಡಿನ ಪ್ರಾಚೀನತೆಯ ವಿವರಣೆ, ಎರಡನೇ ಸಂಪುಟಕ್ಕಾಗುವಾಗ ಮೂರು ಪುಟಕ್ಕಿಂತಲೂ ಹೆಚ್ಚು ವಿಸ್ತಾರವನ್ನು ಪಡೆದುಕೊಳ್ಳುವುದು ಕೇವಲ ಆಕಸ್ಮಿಕವಾಗಿರಲಾರದು. ನಾಡಿನ ಮಹಿಮೆಯನ್ನು ಹೇಳುವ, ಕನ್ನಡದ ವ್ಯಾಪ್ತಿಯನ್ನು ಹೇಳುವ ಕ್ರಮದಲ್ಲೇ ತಾವು ಕಟ್ಟುವ ಕವಿಚರಿತೆಯ ಉದ್ದೇಶವೂ ಸ್ಪಷ್ಟವಾಗುತ್ತದೆ.

ಕವಿಚರಿತೆಯ ಎರಡನೆಯ ಸಂಪುಟದ ಅವತರಣಿಕೆಯಲ್ಲಿ ಈ ಮಾತಿಗೆ ಪೂರಕವಾದ ಮಾತುಗಳು ಬರುತ್ತದೆ. "ಕನ್ನಡಿಗರಿಗೆ ತಮ್ಮ ನಾಡು ನುಡಿಗಳಲ್ಲಿ ಗೌರವ ಬುದ್ಧಿಯೂ ಆದರಾತಿಶಯವೂ ಹುಟ್ಟಿ ಅವುಗಳ ಏಳಿಗೆಗಾಗಿ ಉತ್ಸಾಹದಿಂದೊಡಗೂಡಿದ ಪ್ರಯತ್ನವು ಉಂಟಾಗಬೇಕೆಂಬ ಉದ್ದೇಶದಿಂದ ಮೇಲೆ ಹೇಳಿದ ವಿಷಯಗಳನ್ನೂ ಅವಕ್ಕೆ ಸಂಬಂಧಿಸಿದ ಇನ್ನು ಕೆಲವು ವಿಷಯಗಳನ್ನೂ ಸ್ವಲ್ಪ ಮಟ್ಟಿಗೆ ಇಲ್ಲಿ ವಿವರಿಸಿ ಅನಂತರ ಈ ಸಂಪುಟದ ವಿಷಯವಾಗಿ ಒಂದೆರಡು ಮಾತುಗಳನ್ನು ಬರೆಯುತ್ತೇನೆ" ಎಂದು ಪ್ರಾರಂಭಿಸುತ್ತಾರೆ. ಈ ಮಾತುಗಳೇ ಕವಿಚರಿತೆಕಾರನ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ಕವಿಚರಿತೆಯನ್ನು ಮೂಲಕ ಕಟ್ಟುವ ಪ್ರಾಚೀನ ಕಾವ್ಯ ಪರಂಪರೆಯ ಮೂಲಕ ವರ್ತಮಾನದ ಒಂದು ಎಚ್ಚರವನ್ನು ಉಂಟು ಮಾಡಬೇಕಾಗಿದೆ. ಪಶ್ಚಿಮದಿಂದ ಬಂದ ವಿದ್ವಾಂಸರೇ ಈ ಕೆಲಸವನ್ನು ಮಾಡುತ್ತಿದ್ದಾರೆ. ಆದರೆ ಈ ನಾಡವರು ಅದಕ್ಕೆ ಸ್ಪಂದಿಸಬೇಕಾಗಿತ್ತು. ಆದರೆ ಕನ್ನಡ ನಾಡಿನ ಜನ ಇಂತಹ ವಿದ್ವತ್ ಕಾರ್ಯದಲ್ಲಿ ಜಡರಾಗಿದ್ದಾರೆ. ಹೀಗಾಗಿ ಅದಕ್ಕೆ ಮತ್ತೊಮ್ಮೆ ಪ್ರೇರಣೆಯನ್ನು ಹುಟ್ಟುಹಾಕಿಸಬೇಕು. ಈ ಪ್ರೇರಣೆ ಹುಟ್ಟಬೇಕಾದರೆ ತಾನು ಒಂದು ಸಮೃದ್ಧ ಪರಂಪರೆಯ ವರ್ತಮಾನದ ಕೊಂಡಿ ಎಂಬುದನ್ನು ನೆನಪಿಸಿಕೊಡಬೇಕಾಗುತ್ತದೆ. ಕವಿಚರಿತೆ ಈ ಕೆಲಸವನ್ನು ಮಾಡುತ್ತದೆ.

'ಕರ್ನಾಟಕ ಕವಿಚರಿತೆ' ಎಂಬ ಹೆಸರೇ ಅದು 'ಕರ್ನಾಟಕ' ಎನ್ನುವ ಒಂದು ವಿಶಾಲ ಭೌಗೋಳಿಕ ವಲಯವನ್ನು ಒಳಗೊಳ್ಳುವ ಸ್ವರೂಪದ್ದು. ಕವಿಚರಿತೆಯ ಉದ್ದೇಶ ಕವಿಗಳನ್ನು ಪರಿಚಯಿಸುವ ಪ್ರಯತ್ನದ್ದು. ಇದು ಕವಿಗಳನ್ನು 'ಚರಿತ್ರೆ ದೃಷ್ಟಿಯಿಂದ' ನೋಡುವ ಪ್ರಯತ್ನ. ಇಲ್ಲಿ ಕೃತಿಗಳನ್ನು ನೋಡಬಹುದಾಗಿದ್ದ 'ರಸದೃಷ್ಟಿ' ಹಿಂದಕ್ಕೆ ಸರಿದು 'ಚರಿತ್ರೆ ದೃಷ್ಟಿ'ಯೇ ಪ್ರಧಾನವಾದದ್ದನ್ನು ನೋಡಬಹುದು. ಕವಿಗಳ ಕಾಲದ ಕುರಿತು ನಡೆಸುವ ಚರ್ಚೆಯಲ್ಲಿ ಇದು ವ್ಯಕ್ತವಾಗುತ್ತದೆ. ರೈಸ್‌ರವರು ಸಾಹಿತ್ಯ ಚರಿತ್ರೆಯನ್ನು ಕಟ್ಟುವಾಗ ಸಾಹಿತ್ಯದ ಮೌಲ್ಯ ವಿವೇಚನೆಯನ್ನು ಬಹುವಾಗಿ ಮಾಡಿದ್ದಾರೆ. ಆದರೆ ನರಸಿಂಹಾಚಾರ್ಯರು ಕವಿ ಎಣಿಕೆಯ ಮಾದರಿಯಲ್ಲಿ ಈ ಚರಿತೆಯನ್ನು ಕಟ್ಟಿದ್ದರಿಂದ ಅವರ ಮುಖ್ಯ ಒತ್ತು ಕವಿಗಳ ಮೇಲೆ ಇದೆ

ಹೊರತು ಕಾವ್ಯದ ಮೇಲೆ ಅಲ್ಲ. ಕವಿಚರಿತೆಕಾರ ಕವಿ ಪರಂಪರೆಯನ್ನು ಬಹು ವಿಸ್ತಾರವಾಗಿ ಗುರುತಿಸುತ್ತಾರೆ. ಆದರೆ ಈ ಚರಿತೆ ಕಾವ್ಯದ ಪರಂಪರೆಯನ್ನು ಅಷ್ಟು ಶಕ್ತವಾಗಿ ಗುರುತಿಸಿಲ್ಲ.

ಕವಿ ಚರಿತೆಕಾರ ಕನ್ನಡದ ಕವಿ ಪರಂಪರೆಯನ್ನು ಗುರುತಿಸುವುದು ಹೀಗೆ. "ಕನ್ನಡದಲ್ಲಿ ಗ್ರಂಥರಚನೆ ಮಾಡಿರುವ ಕವಿಗಳನ್ನು ಸ್ಥೂಲವಾಗಿ ಜೈನರು, ವೀರಶೈವರು, ವೈಷ್ಣವರು ಎಂಬ ಮೂರು ಪಂಗಡವಾಗಿ ವಿಂಗಡಿಸಬಹುದು. ಈ ಮೂರು ಪಂಗಡದವರಲ್ಲದೆ ಇತರರೂ ಕೂಡ ಕನ್ನಡದಲ್ಲಿ ಹಲವು ಗ್ರಂಥಗಳನ್ನು ರಚಿಸಿದ್ದಾರೆ"[೨] ಎನ್ನುತ್ತಾರೆ. ಈ ನೆಲೆಯಿಂದ ಕನ್ನಡದ ಕವಿ ಪರಂಪರೆಯನ್ನು ಈ ಹಿಂದಿನ ಚರಿತ್ರೆಕಾರರಂತೆ ಗುರುತಿಸಿ ವಿಭಜಿಸುತ್ತಾರೆ. ಈ ವಿಭಜನೆಯನ್ನು ಮಾಡಿದಾಗಲೂ ಒಟ್ಟು ಕವಿ ಪರಂಪರೆಯ ನಡುವೆಯೇ ಇರುವ ಒಂದು ಸಮ್ಮಿಶ್ರಣತೆಯನ್ನೂ ಕೂಡ ಗುರುತಿಸುತ್ತಾರೆ. "ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಮತದ ಕವಿಗಳು ವಿಶೇಷವಾಗಿ ಗ್ರಂಥ ರಚನೆ ಮಾಡಿದ್ದಾರೆಂಬ ಅಂಶವನ್ನು ಸ್ಥೂಲವಾಗಿ ತಿಳಿಸುವುದಕ್ಕೋಸ್ಕರ ಈ ರೀತಿಯಾಗಿ ಕಾಲ ವಿಭಾಗ ಮಾಡಿದೆ. ಇದರಿಂದ ಜೈನರ ಕಾಲದಲ್ಲಿ ಶೈವ ವೈಷ್ಣವ ಗ್ರಂಥಗಳೂ, ಶೈವರ ಕಾಲದಲ್ಲಿ ವೈಷ್ಣವ ಜೈನ ಗ್ರಂಥಗಳೂ ವೈಷ್ಣವರ ಕಾಲದಲ್ಲಿ ಶೈವ ಜೈನ ಗ್ರಂಥಗಳೂ ಹುಟ್ಟಿಲ್ಲವೆಂದು ತಿಳಿಯಬಾರದು"[೩] ಎಂದು ಹೇಳುವ ಮೂಲಕ ಆ ವಿವಿಧತೆಯನ್ನು ಗುರುತಿಸುತ್ತಾರೆ. ಆದರೆ ಇ.ಪಿ. ರೈಸ್ ತನ್ನ ಸಾಹಿತ್ಯ ಚರಿತ್ರೆಯ ಸಂದರ್ಭದಲ್ಲಿ ಈ ವಿವಿಧತೆಯನ್ನು ಗುರುತಿಸಲಾಗದೆ ಹೋಗಿರುವ ಅಂಶ ಕಂಡು ಬರುತ್ತದೆ. ರೈಸರು ತನ್ನ ಸಾಹಿತ್ಯ ಚರಿತ್ರೆಯಲ್ಲಿ "ಈ ಇಡೀ ಸಾಹಿತ್ಯ ಚರಿತ್ರೆಯನ್ನು ಉಪಶಾಖೆಗಳನ್ನು ಬರಮಾಡಿಕೊಂಡು ಹರಿಯುವ ಒಂದು ನದಿಗೆ ಹೋಲಿಸಬಹುದು. ತನ್ನ ಮೊದಲ ಸಾವಿರ ವರ್ಷಗಳಲ್ಲಿ ಈ ನದಿಯ ಸ್ವರೂಪವು ಒಂದು ಶುದ್ಧ ಜೈನ ತತ್ವದ ಪ್ರವಾಹವಾಗಿತ್ತು. ಹನ್ನೆರಡನೆಯ ಶತಮಾನದಲ್ಲಿ ವೀರಶೈವ ಪ್ರವಾಹವು ಬಂದು ಸೇರಿತು. ಮತ್ತು ಈ ಎರಡೂ ಪ್ರವಾಹಗಳು ಒಂದರಲ್ಲೊಂದು ಸಮ್ಮಿಳಿತವಾಗದೆ ಪಕ್ಕ ಪಕ್ಕದಲ್ಲಿಯೇ ಪ್ರವಹಿಸಿದವು. 16ನೇ ಶತಮಾನದ ಆರಂಭದಲ್ಲಿ ವೈಷ್ಣವ ಪ್ರವಾಹವು ಈ ಎರಡೂ ಪ್ರವಾಹಗಳನ್ನು ಬಂದು ಸೇರಿತು. ಮತ್ತು ಈ ಸಮ್ಮಿಳಿತ ಪ್ರವಾಹವು 16ನೇ ಶತಮಾನದವರೆಗೆ ಹಾಗೆಯೇ ಹರಿದು, ಪಾಶ್ಚಾತ್ಯ ವಿಚಾರ ಸರಣಿಯು ದುಮ್ಮಿಕ್ಕಿ ಪ್ರವೇಶಿಸುವುದರಿಂದ ಅತಿ ವ್ಯಾಪಕತೆಯನ್ನು ಹಾಗೂ ವಿಪುಲ ಪರಿವರ್ತನೆಯನ್ನು ಹೊಂದಿತು"[೪] ಎಂದು ಹೇಳುವ ಮೂಲಕ ಒಂದೇ ಕಾಲದ ಅನೇಕತೆಗಳ ಸಂಯೋಗಗಳನ್ನು ಗುರುತಿಸದಾದರು.

ಕರ್ನಾಟಕ ಕವಿಚರಿತೆ ಕನ್ನಡದ 'ಸ್ವ' ವನ್ನು ಕಟ್ಟುವ ಚರಿತೆ. ಹೀಗಾಗಿ ಇದು ಕೇವಲ 'ಕವಿ' ಚರಿತೆಯಾಗಿ ಮಾತ್ರ ಉಳಿಯದೆ ಅದು ದ್ರಾವಿಡ ಭಾಷಾ ಪ್ರಭೇದಗಳಲ್ಲಿ ಕನ್ನಡದ ಸ್ಥಾನವನ್ನು ಗುರುತಿಸುತ್ತದೆ. ಜೊತೆಗೆ ಕನ್ನಡ ಭಾಷೆಯು ಪ್ರಚಾರದಲ್ಲಿದ್ದ ಸ್ಥಳಗಳು, ಕರ್ನಾಟ ಶಬ್ದದ ವ್ಯುತ್ಪತ್ತಿ,

ಕನ್ನಡ ನಾಡಿನ ಮತ್ತು ಭಾಷೆಯ ಪ್ರಾಚೀನತೆಯನ್ನು ಕಟ್ಟುವ ಚರಿತೆಯಾಗುತ್ತದೆ. 'ಕನ್ನಡತನ'ದ ಬಗೆಗೆ ತಿಳುವಳಿಕೆ ಇಲ್ಲದಿದ್ದ ಸಂದರ್ಭದಲ್ಲಿ ಕನ್ನಡದ ಅಪಾರವಾದ ಜ್ಞಾನರಾಶಿಯನ್ನು ಒಂದು ರೂಪಕ್ಕೆ ತಂದು ಪ್ರಕಟಿಸಿದ್ದು ವಿಶೇಷ. ಮೊದಲ ಸಂಪುಟದ ಅವತರಣಿಕೆಯಲ್ಲಿ ಉದ್ದಕ್ಕೂ ಕನ್ನಡನಾಡಿನ, ನುಡಿಯ ಪ್ರಾಚೀನತೆಯನ್ನು ದ್ರಾವಿಡ ಭಾಷೆಯಲ್ಲಿ ಕನ್ನಡದ ಸ್ಥಾನಮಾನವನ್ನು ಕುರಿತಂತೆ ಬಹಳ ವಿಸ್ತಾರವಾಗಿ ತಿಳಿಸಿಯೂ ಮತ್ತೆ ಎರಡನೆಯ ಸಂಪುಟದಲ್ಲಿ ಕನ್ನಡ ನಾಡಿನ ಪ್ರಾಚೀನತೆಯನ್ನು ಹೇಳುತ್ತಾರೆ. ಇದು ದೇಶೀಯ ಪಂಡಿತರಾಗಿ ನರಸಿಂಹಾಚಾರ್ಯರ ಕಾಳಜಿ.

ನಾಡಿನ ಪ್ರಾಚೀನತೆಯನ್ನು ಕುರಿತು ಹೇಳುವಾಗ "ಶಿಲಪ್ಪಾದಿಕಾರಂ ಎಂಬ ಮತ್ತೊಂದು ತಮಿಳು ಗ್ರಂಥದಲ್ಲಿ ಸುಮಾರು ಎರಡನೆಯ ಶತಮಾನದಲ್ಲಿ ಶೆಂಗುಟ್ಟುವ್ವ ಎಂಬ ಜೇರರಾಜನು ಉತ್ತರ ದಿಕ್ಕಿಗೆ ಹೋಗುವಾಗ ನೀಲಗಿರಿಯಲ್ಲಿ ತಂಗಿ ಕನ್ನಡರು ಆಡಿದ ಕುಣಿತವನ್ನು ನೋಡಿ ಸಂತೋಷಿಸಿದನು ಎಂದು ಹೇಳಿದೆ. ಈಯಂಶಗಳಿಂದ ಮೈಸೂರು ದೇಶದ ಪ್ರಾಚೀನತೆ ವ್ಯಕ್ತವಾಗುತ್ತದೆ"[೫] ಎನ್ನುವಾಗ ಇರುವ ಅಭಿಮಾನ, "ಕನ್ನಡನಾಡು ಸಕಲ ಸುಖಗಳಿಗೂ, ಉತ್ತಮ ಗುಣಗಳಿಗೂ ನಿವಾಸ ಭೂಮಿಯಾಗಿದ್ದುದಲ್ಲದೆ, ಧರ್ಮ ಪರಾಯಣರಾದ ರಾಜರಿಂದಲೂ, ಪ್ರಸಿದ್ಧರಾದ ವಿದ್ವಾಂಸರಿಂದಲೂ ಸಮರ್ಥರಾದ ರಾಜ್ಯ ತಂತ್ರಜ್ಞರಿಂದಲೂ ಪ್ರಖ್ಯಾತರಾದ ತತ್ವದರ್ಶಿಗಳಿಂದಲೂ, ಭಕ್ತ ಶಿರೋಮಣಿಗಳಿಂದಲೂ, ಮಹಾಶೂರರಿಂದಲೂ, ಪ್ರಬಲರಾದ ವರ್ತಕರಿಂದಲೂ, ಕುಶಲರಾದ ಶಿಲ್ಪಿಗಳಿಂದಲೂ, ಸ್ವಾಮಿಭಕ್ತಿ ಶೋಭಿತರಾದ ಸೇವಕರಿಂದಲೂ ಅಲಂಕೃತವಾಗಿದ್ದಿತು"[೬] ಎಂಬ ಮಾತುಗಳು ಕವಿಚರಿತೆಯ ರಚನೆಯ ಹಿಂದಿದ್ದ ಮನೋಭೂಮಿಕೆಯ ಅನಾವರಣ ಎಂದು ಹೇಳಬಹುದು. ನರಸಿಂಹಾಚಾರ್ಯರಿಗೆ ಕನ್ನಡ ನಾಡಿನ ವಿಸ್ತಾರದ ಪುರಾತನತೆಯ ಹಾಗೂ ಬಾಳಿ ಬದುಕಿದ ಕವಿ ಪುಂಗವರ ವಿವರಣೆ ಸಂತೃಪ್ತಿಯ ಕೆಲಸ.

'ಕನ್ನಡ ನಾಡಿನ ಮಹಿಮೆ' ಎಂದು ಹೇಳುವ ಈ ಭಾಗ ಎಲ್ಲ ಸಂಗತಿಗಳಿಂದಲೂ ಕನ್ನಡ ನಾಡಿನ ಉನ್ನತಿಕೆಯನ್ನು ಹೇಳಲಾಗಿದೆ. ಕವಿಚರಿತೆಗೆ ತನ್ನ ನಾಡಿನ, ಭಾಷೆಯ ಹಿರಿಮೆಯನ್ನು ತನ್ನ ನಾಡಿನ ಜನರಿಗೆ, ಭಾಷಿಕರಿಗೆ ಹೇಳುವುದು ಮುಖ್ಯ ಮತ್ತು ಅದರ ಬಗೆಗೆ ಒಂದು ಅಭಿಮಾನವನ್ನು ಉಂಟು ಮಾಡುವುದು ಮುಖ್ಯ. ರೈಸ್ ಅವರು ಕನ್ನಡ ಭಾಷೆಯ ಚರಿತೆಯನ್ನು ಇಂಗ್ಲೀಷ್‌ನಲ್ಲಿ ಬರೆಯುತ್ತಲೇ ಕನ್ನಡಿಗರಿಗೆ ಕನ್ನಡದ ಸಂಗತಿಗಳನ್ನು ತಿಳಿಸುವ ಉದ್ದೇಶಕ್ಕಿಂತಲೂ ಬೇರೆ ಭಾಷಿಕರಲ್ಲಿ ಕನ್ನಡದ ತಿಳುವಳಿಕೆಯನ್ನು ಉಂಟು ಮಾಡುವುದೇ ಮುಖ್ಯ ಸಂಗತಿ ಎಂಬಂತಿದೆ. ಈ ಮಾತಿಗೆ ಪೂರಕವಾಗಿ ಪ್ರಥಮ ಸಂಪುಟದಲ್ಲಿ ನರಸಿಂಹಾಚಾರ್ಯರು ತನ್ನ ಬಗೆಗೆ ಬಂದ ಟೀಕೆ 'ಡಾ। ನರಸಿಂಹಾಚಾರ್ಯರು ತಮಗೆ ಸಂಬಳವು ದೊರೆಯುವುದೆಂದು ಪರಿಶ್ರಮಿಸಿ ಶೋಧ ಮಾಡಿದರು' ಎಂಬ ಮಾತಿಗೆ ಪ್ರತಿಕ್ರಿಯಿಸಿದ್ದು ಹೀಗೆ "ಕವಿಚರಿತೆಯನ್ನು ನಾನು ಸರಕಾರಕ್ಕಾಗಿ

ಸಂಬಳವನ್ನು ಹೊಂದಿ ಬರೆಯಲಿಲ್ಲ, ಭಾಷಾ ಸೇವೆಯನ್ನು ಮಾಡಬೇಕೆಂಬ ಉತ್ಕಟೇಚ್ಛೆಯಿಂದ ಶ್ರಮಪಟ್ಟು ಸ್ವಂತ ದ್ರವ್ಯವನ್ನು ವ್ಯಯ ಮಾಡಿ ಪ್ರಕಟಿಸಿದೆನು"[೭] ಎನ್ನುತ್ತಾರೆ.

"ಕನ್ನಡ ನಾಡಿನಲ್ಲಿ ಶ್ರೀ ಪುರುಷ, ನೃಪತುಂಗ, ತೈಲಪ, ಪ್ರಭುವನಮಲ್ಲ, ವಿಷ್ಣುವರ್ಧನ, ವೀರಬಲ್ಲಾಳ, ಬುಕ್ಕ, ಹರಿಹರ, ಕೃಷ್ಣದೇವರಾಯ, ರಾಜನೃಪ, ಕಂಠೀರವ ನರಸರಾಜ, ಚಿಕ್ಕ ದೇವರಾಜ ಇವರೇ ಮೊದಲಾದ ಪರಾಕ್ರಮಶಾಲಿಗಳೂ ವಿದ್ಯಾಪಕ್ಷಪಾತಿಗಳೂ, ಧರ್ಮನಿಷ್ಠರೂ ಆದ ದೊರೆಗಳು ರಾಜ್ಯಭಾರ ಮಾಡಿ ದಿಗಂತ ವಿಶ್ರಾಂತವಾದ ಕೀರ್ತಿಯನ್ನು ನೆಲೆಗೊಳಿಸಿದ್ದಾರೆ. ಇವರು ಭಿನ್ನ ಮತಸ್ಥರಾದರೂ ರಾಗ ದ್ವೇಷಗಳಿಲ್ಲದೆ ಅನ್ಯಮತಗಳನ್ನು ಸಮದೃಷ್ಟಿಯಿಂದ ಕಾಣುತ್ತಾ ಅವಕ್ಕೆ ಪ್ರೋತ್ಸಾಹವನ್ನು ಕೊಡುತ್ತಿದ್ದರು. ಬೇರೆ ಬೇರೆ ಮತಸ್ಥರಿಗೆ ಪರಸ್ಪರ ವೈಶಮ್ಯವು ಹುಟ್ಟಿದಾಗ ಸಮಾಧಾನಪಡಿಸಿ ಸೌಹಾರ್ಧವನ್ನುಂಟು ಮಾಡುತ್ತಿದ್ದರು"[೮] ಎಂದು ಈ ನಾಡಿನ ಹಿರಿಮೆಯನ್ನು ಹೇಳಿದ್ದಾರೆ. ಈ ನಾಡು ಪರಕೀಯ ದಾಸ್ಯದಲ್ಲಿದ್ದ ಸಂದರ್ಭದಲ್ಲಿ ಈ ಮಾತುಗಳು ಬಂದದ್ದು. ಬ್ರಿಟೀಷರು ಕಟ್ಟಿದ ಆಡಳಿತ ವ್ಯವಸ್ಥೆಯ ಒಂದು ಭಾಗವಾಗಿದ್ದುಕೊಂಡೇ ದೇಶೀಯ ರಾಜ ಪರಂಪರೆಯೊಂದನ್ನು ಸ್ಮರಿಸಿಕೊಳ್ಳುವ ಬಗೆ ಒಂದು ಪರ್ಯಾಯವನ್ನು ಕಟ್ಟುವ ಚಿಂತನೆಯಿಂದ ಪ್ರೇರೇಪಣೆಯನ್ನು ಪಡೆದಿದೆ. ಇಲ್ಲಿ ಎಲ್ಲಾ ವಾಕ್ಯಗಳು ಭೂತಕಾಲವನ್ನು ಸೂಚಿಸುತ್ತವೆ. ಅಂದರೆ ವರ್ತಮಾನದಲ್ಲಿ ಇದು ಇಲ್ಲ. ಆ ಭೂತಕಾಲದ ವೈಭವವನ್ನು ಮತ್ತೆ ಪರಕೀಯತೆಯ ಬದುಕಿನ ನಡುವೆಯೇ ನೆನೆದುಕೊಳ್ಳುತ್ತಾರೆ. ಗತವನ್ನು ಇಲ್ಲಿ ಕಟ್ಟಿಕೊಡುವುದು ವರ್ತಮಾನದಲ್ಲಿ ಇಲ್ಲ ಎಂಬ ಹಳಹಳಿಕೆಯಿಂದಲ್ಲ. ನಾಡಿನ ಭಾಷಿಕರಿಗೆ ಈ ಪರಂಪರೆಯನ್ನು ನೆನಪಿಸಿಕೊಡುವ ಕೆಲಸ ಇದು ಎಂಬುದನ್ನು ನಾವು ಗಮನಿಸಬೇಕು.

ಇಷ್ಟೇ ಅಲ್ಲದೆ ಇನ್ನೂ ಒಂದು ಕಾರಣಕ್ಕಾಗಿ ಈ ಮೇಲಿನ ಮಾತುಗಳನ್ನು ಕವಿಚರಿತೆಕಾರ ಹೇಳಿರಬಹುದು. ಕವಿಚರಿತೆಯ ದ್ವಿತೀಯ ಸಂಪುಟ ಪ್ರಕಟವಾದದ್ದು 1919ರಲ್ಲಿ. ಇ.ಪಿ. ರೈಸ್‌ರವರ 'A History of Kanarese Literature' ಪ್ರಕಟವಾದದ್ದು 1915ರಲ್ಲಿ. ಇ.ಪಿ.ರೈಸ್‌ರು ಕನ್ನಡ ಸಾಹಿತ್ಯದ ಕೆಲವು ವೈಲಕ್ಷಣಗಳನ್ನು ಹೇಳುವಾಗ ಮೊದಲೇ ಉಲ್ಲೇಖಿಸಿದಂತೆ "ಈಗ ಒಂದು ನೂತನ ಉಜ್ಜೀವನಕಾರಿ ಶಕ್ತಿಯು ಪ್ರವೇಶಿಸಿದೆ... ಎಂದು ಹೇಳುತ್ತಾ ಸ್ವಾರ್ಥಪರವಾದ ಮತೀಯತೆಗಿಂತಲೂ ಮಾನವೀಯ ಸೋದರತ್ವದ ಆತ್ಮಾರ್ಪಣೆಯ ಸೇವೆಯು ಉದಾತ್ತವಾದುದು ಎಂಬುದನ್ನು ಈ ನಾಡವರು ಇತ್ತೀಚೆಗೆ ಅರಿಯತೊಡಗಿದ್ದಾರೆ" ಎಂಬ ಮಾತಿಗೆ ಪ್ರತಿಕ್ರಿಯೆಯಾಗಿ ಈ ಮಾತುಗಳು ಬಂದಿರಬಹುದು. ಎರಡನೆಯ ಸಂಪುಟದಲ್ಲಿ "... ಪರಾಕ್ರಮಶಾಲಿಗಳೂ, ವಿದ್ಯಾಪಕ್ಷಪಾತಿಗಳೂ, ಧರ್ಮನಿಷ್ಠರೂ ಆದ ದೊರೆಗಳು ರಾಜ್ಯಭಾರ ಮಾಡಿ ದಿಗಂತ ವಿಶ್ರಾಂತವಾದ ಕೀರ್ತಿಯನ್ನು ನೆಲೆಗೊಳಿಸಿದ್ದಾರೆ. ಇವರು ಭಿನ್ನ ಮತದವರಾದರೂ ರಾಗ

ದ್ವೇಷಗಳಿಲ್ಲದೆ ಅನ್ಯಮತಗಳನ್ನು ಸಮಷ್ಟಿಯಿಂದ ಕಾಣುತ್ತಾ ಅದಕ್ಕೆ ಪ್ರೋತ್ಸಾಹ ಕೊಡುತ್ತಿದ್ದರು..." ಎಂಬ ಮಾತುಗಳು ಪ್ರತಿಕ್ರಿಯೆಯೇ ಇರಬಹುದು.

ವಸಾಹತುವೊಂದು ಪ್ರವೇಶ ಪಡೆಯಬಹುದಾದ ಎರಡು ದಾರಿಗಳಾದ ಮತೀಯ ಪ್ರಚಾರ ಮತ್ತು ಪ್ರಭುತ್ವ ನಿರ್ಮಾಣಗಳ ಪೂರ್ವದಲ್ಲೇ ಮಾಡುವ ಬೌದ್ಧಿಕ ಸನ್ನದ್ಧತೆಯನ್ನು ಎದುರಿಸಿರಬಹುದಾದ ಬಗೆಯಿದು ಎಂದು ಹೇಳಬಹುದು. ಕವಿಚರಿತೆ ಒಂದು ಮಾದರಿಗೆ ಮುಖಾಮುಖಿಯಾದ 'ಸ್ವ' ದ ಕಟ್ಟುವಿಕೆಯಾಗಿದೆ. ಕವಿ ಚರಿತೆ ಉದ್ದಕ್ಕೂ ಈ ಪ್ರಜ್ಞೆಯನ್ನು ಬಹು ಜಾಗೃತವಾಗಿ ಇಟ್ಟುಕೊಂಡಿದೆ. ಈ ನಾಡಿನ ಒಂದು ಸಮಗ್ರವಾದ ಜ್ಞಾನ ಪರಂಪರೆಯನ್ನು ಕಟ್ಟಿಕೊಡಬೇಕು. ಇದಕ್ಕಾಗಿ ಅವರು 1148ರಷ್ಟು ಕವಿಗಳ ಚರಿತೆಯನ್ನು ಹೇಳುತ್ತಾರೆ. ದೇಶೀ ಪಂಡಿತ ಪರಂಪರೆಯ ನೆಲೆಯಿಂದ ನರಸಿಂಹಾಚಾರ್ಯರನ್ನು ಗುರುತಿಸುವುದಾದರೆ, ಮಿಷನರಿ ವಿದ್ವಾಂಸರಿಗಿಂತ ಭಿನ್ನವಾಗಿ ನಿಲ್ಲುವುದು ಅವರ ನಿರೂಪಣೆಯ ಕ್ರಮದಲ್ಲಿ. ಆ ನಿರೂಪಣೆಯಲ್ಲಿಯೇ ಒಂದು ದೇಶೀತನ ಇದೆ. ಕವಿ ಚರಿತೆಕಾರನ ತುರ್ತು ತನ್ನ ಭಾಷಿಕರಿಗೆ ಹಿರಿಮೆಯನ್ನು, ಶ್ರೇಷ್ಠತೆಯನ್ನು ನೆನಪು ಮಾಡಿಕೊಡುವುದು.

ಕವಿಚರಿತೆಯ ಎರಡನೆಯ ಸಂಪುಟದಲ್ಲಿ ನನ್ನ ತಿಳುವಳಿಕೆಗೆ ಬಂದ ಪ್ರತಿಯೊಬ್ಬ ಗ್ರಂಥಕರ್ತನ ಹೆಸರೂ ಗ್ರಂಥದಲ್ಲಿ ಇರಬೇಕೆಂಬ ಉದ್ದೇಶದಿಂದ ಎಲ್ಲರನ್ನೂ ಸೇರಿಸಿದ್ದೇನೆ. ಹೀಗೆ ಮಾಡದಿದ್ದರೆ ಅನೇಕ ಸಾಧಾರಣ ಕವಿಗಳ ಹೆಸರೇ ಮರೆತು ಹೋಗುವುದರಲ್ಲಿ ಸಂಶಯವಿಲ್ಲ"[೬] ಎನ್ನುತ್ತಾರೆ. ಈ ಮಾತುಗಳನ್ನು ಬಹಳ ಮುಖ್ಯ ಎಂದು ಪರಿಗಣಿಸಬೇಕು. ಒಂದು ಭಾಷೆಯ ಸಾಹಿತ್ಯ ಎಲ್ಲ ಸಂದರ್ಭದಲ್ಲೂ ಉದ್ದಾಮ ಕವಿಗಳನ್ನೇ ಸೃಷ್ಟಿಸಿರುವುದಿಲ್ಲ. ಅದರರ್ಥ ಎರಡು ಮಹಾ ಕವಿಗಳ ನಡುವೆ ಬಂದ ಒಬ್ಬ ಸಾಧಾರಣ ಕವಿಯನ್ನು ಅಳಿಸಿ ಹಾಕಬೇಕಾಗಿಲ್ಲ. ಅವನು ಈ ಎರಡರ ನಡುವಿನ ಒಂದು ಕೊಂಡಿ. ಒಂದು ಕಾಲ ಈ ಕವಿಯ ಮೂಲಕವೇ ಅಭಿವ್ಯಕ್ತಿಗೊಂಡಿದೆ ಎಂಬುದನ್ನು ಗಮನಿಸಬೇಕು. ಸಾಹಿತ್ಯ ಚರಿತ್ರೆ ಇಡೀ ಒಂದು ಕಾಲದ ಸಾಹಿತ್ಯದ ಒಡಲನ್ನು ಬಗೆದು ಕಟ್ಟುವ ಸಾಂಸ್ಕೃತಿಕ, ರಾಜಕೀಯ ಚರಿತ್ರೆಯೂ ಆಗಿರುವುದರಿಂದ ಇವನ್ನು ಗಮನಿಸಬೇಕು.

ಕವಿ ಚರಿತೆಕಾರನಿಗೆ ಗಮನ ಇರುವುದು ತನ್ನ ಕಾಲಕ್ಕೆ ಲಭ್ಯವಿರುವ ಎಲ್ಲ ಕವಿಗಳ ಕುರಿತಾಗಿಯೂ ತಾನು ಹೇಳಬೇಕು ಎನ್ನುವುದರ ಕುರಿತು. ಯಾವುದೋ ಒಂದು ಕಾಲಘಟ್ಟದಲ್ಲಿ ಅತ್ಯುತ್ತಮವೆಂದು ಪರಿಗಣಿಸಬಹುದಾದ ಕೃತಿಗಳು ಬಂದಿಲ್ಲ ಎಂದೇ ಹೇಳುವುದಾದರೆ, ಸಾಹಿತ್ಯ ಚರಿತ್ರೆ ಅಂತಹ ಒಂದು ವಿವೇಚನೆಯನ್ನೂ ಕೂಡ ಹುಟ್ಟು ಹಾಕಿಸುತ್ತದೆ. ಅದೇನೆಂದರೆ ಹಾಗಾದರೆ ಆ ಕಾಲದ ಸಾಮಾಜಿಕ ಸಂದರ್ಭ ಯಾಕೆ ಅಂತಹ ಉತ್ತಮ ಕಾವ್ಯವನ್ನು ರಚಿಸುವ ಒತ್ತಡವನ್ನು

ಉಂಟು ಮಾಡಿರಲಿಲ್ಲ ಅಥವಾ ಕವಿಯ ಆಶ್ರಯಕ್ಕೆ ಸರಿಯಾದ ಒಂದು ವ್ಯವಸ್ಥೆ ಇರಲಿಲ್ಲವ್ರೋ ಏನೋ? ಕಾವ್ಯಕ್ಕೆ ಸರಿಯಾದ ಮನ್ನಣೆ ದೊರೆಯುತ್ತಿರಲಿಲ್ಲವ್ರೋ ಏನೋ? ಎಂದು ಊಹಿಸಬಹುದು. ಈ ತಿಳುವಳಿಕೆ ಇ.ಪಿ. ರೈಸ್‌ರ 'ಅಷ್ಟೊಂದು ಪ್ರಮುಖರಲ್ಲದ ಎಲ್ಲ ಕವಿಗಳನ್ನು ಪಟ್ಟಿ ಮಾಡಿದರೆ ಓದುಗನಿಗೆ ಬೇಸರವಲ್ಲದೆ ಮತ್ತೇನೂ ಅಲ್ಲ' ಎಂಬ ನಿಲುವಿಗಿಂತ ಭಿನ್ನವಾದದ್ದು.

ಒಟ್ಟಿನಲ್ಲಿ ಕನ್ನಡದ ಪಾಲಿಗೆ ಒಂದು ಸಾಂಸ್ಕೃತಿಕ ಗುರುತಾಗಿ ನಿಲ್ಲಬಲ್ಲಂತಹ ಕರ್ನಾಟಕ ಕವಿಚರಿತೆ, ಕನ್ನಡತನದ ಶೋಧದ ಪರಿಣಾಮ. ಭಾಷೆಯ ಮೂಲಕವೇ ಕಟ್ಟುವ ಒಂದು ಚರಿತ್ರೆ ಇದು. ಮುಂದೆ ಈ ಕವಿಚರಿತೆಯನ್ನು ಕಟ್ಟಿದ ವಿನ್ಯಾಸದ ಬಗೆಗೆ ಹಲವು ಪ್ರಶ್ನೆಗಳನ್ನು ಎತ್ತಲಾಯಿತಾದರೂ ಕವಿಚರಿತಕಾರ ಸಂಗ್ರಹ ಮಾಡಿದ ಆಕರಗಳ ಮೂಲಕ ಕಟ್ಟಿದ ಚರಿತೆಯ ವಸ್ತುವಿನ ಬಗೆಗೆ ಅಪಾರವಾದ ಮಾನ್ಯತೆ ಇದೆ. ಈ ಆಕರ ಸಾಮಾಗ್ರಿಗಳ ಮೂಲಕವೇ ಮುಂದೆ ಇನ್ನಷ್ಟು ತರ್ಕಬದ್ಧವಾದ, ನಿಖರವಾದ ಸಾಹಿತ್ಯ ಚರಿತ್ರೆಯನ್ನು ಕಟ್ಟಲಾಗಿದೆ. ಕವಿಚರಿತೆಯ ಬಗೆಗೆ ಬಹು ಮುಖ್ಯವಾಗಿ ಪ್ರಶ್ನೆಯನ್ನು ಎತ್ತಿ ಅದಕ್ಕೆ ಪ್ರತಿಕ್ರಿಯಿಸಿದವರು ಎ. ವೆಂಕಟಸುಬ್ಬಯ್ಯನವರು. ಈ ಪ್ರತಿಕ್ರಿಯೆಯೇ ಕನ್ನಡ ಸಾಹಿತ್ಯ ಚರಿತ್ರೆಯ ಒಂದು ಮುಖ್ಯ ಆಕರವಾದದ್ದು ವಿಶೇಷ. ಅದನ್ನು ಮುಂದಿನ ಭಾಗದಲ್ಲಿ ವಿವರಿಸಿಕೊಳ್ಳಲಾಗುವುದು. ಕವಿಚರಿತೆ ಕನ್ನಡದ ಸಾಹಿತ್ಯ ಚರಿತ್ರೆಯನ್ನು ಕಟ್ಟಲು ಬೇಕಾದ ಸಾಮಗ್ರಿ ಬಾಹುಳ್ಯತೆಗೆ ಮತ್ತು ಕನ್ನಡ ಸಾಹಿತ್ಯದ ಹರಿವಿನ ಸಂಕೀರ್ಣತೆಗೆ ಪ್ರತೀಕವಾಗಿಯೇ ನಿಂತಿದೆ.

## ೫.೪. ಎ. ವೆಂಕಟಸುಬ್ಬಯ್ಯ ವಿದ್ವತ್ ಪ್ರಪಂಚದ ಕೊಂಡಿ

ಎ. ವೆಂಕಟಸುಬ್ಬಯ್ಯನವರು 1886ರಲ್ಲಿ ಜನಿಸಿದರು. ಮದರಾಸು ವಿ.ವಿ.ಯಲ್ಲಿ ಸಂಸ್ಕೃತ ಎಂ.ಎ. ಪದವಿಯನ್ನೂ, ಜರ್ಮನಿಯ ಪ್ರೊ. ಮುಲ್ಲರ್ ಹೆಸ್ ಎಂಬವರ ಮಾರ್ಗದರ್ಶನದಲ್ಲಿ ಸಂಸ್ಕೃತ ಪಿಎಚ್.ಡಿ ಪದವಿಯನ್ನು ಸ್ವಿಟ್ಜರ್‌ಲ್ಯಾಂಡಿನ ಬರ್ನ್ ವಿಶ್ವವಿದ್ಯಾನಿಲಯದಿಂದ ಪಡೆದರು. ಸ್ವಲ್ಪ ಕಾಲ ಕಾಶಿ ಸೆಂಟ್ರಲ್ ಹಿಂದೂ ಕಾಲೇಜಿನಲ್ಲಿ ಇತಿಹಾಸ ಅಧ್ಯಾಪಕರಾಗಿ, ಸೇವೆ ಸಲ್ಲಿಸಿ, ಮುಂದೆ ಮೈಸೂರು ಸಂಸ್ಥಾನದ ಪುರಾತತ್ವ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಸೇರಿದರು. ಆಗ ಆರ್. ನರಸಿಂಹಾಚಾರ್ಯರು ಪುರಾತತ್ವ ಇಲಾಖೆಯ ನಿರ್ದೇಶಕರಾಗಿದ್ದರು. ಅಲ್ಲೂ ಸ್ವಲ್ಪ ಕಾಲದ ನಂತರ ರಾಜೀನಾಮೆ ನೀಡಿ ಹೊರಬಂದರು. ನರಸಿಂಹಾಚಾರ್ಯರನ್ನು ವಿಶೇಷವಾಗಿ ಟೀಕೆ ಮಾಡಿದ ಕಾರಣಕ್ಕಾಗಿಯೇ ರಾಜೀನಾಮೆ ನೀಡಿದ್ದಾರೆ ಎಂದು ಎನ್. ಅನಂತರಂಗಾಚಾರ್ಯರು 'ರಾ।ನರಸಿಂಹಾಚಾರ್ಯ: ಜೀವನ ಕಾರ್ಯ' ಎಂಬ ಕೃತಿಯಲ್ಲಿ ತಿಳಿಸಿದ್ದಾರೆ.

"ಆಚಾರ್ಯರನ್ನು ವಿಶೇಷವಾಗಿ ಟೀಕೆ ಮಾಡಿದವರು ಡಾ। ಎ. ವೆಂಕಟಸುಬ್ಬಯ್ಯನವರು ಇವರು ಆಚಾರ್ಯರಲ್ಲಿ ಸಹಾಯಕ ಅಧಿಕಾರಿಗಳಾಗಿ ಕೆಲಸ ಮಾಡುತ್ತಿದ್ದರು. ಒಂದು ಸಲ ಇವರು ತಮ್ಮ ಇಲಾಖೆಯಿಂದ ಪ್ರಕಟವಾದ ವರದಿಯಲ್ಲಿ ವಿಚಾರಿತವಾದ ವಿಷಯವನ್ನು, ಕಟುವಾಗಿ

ಬೇರೆಡೆಯಲ್ಲಿ ಖಂಡಿಸಿದರು. ಇಂತಹ ಕಾರ್ಯವು ಇಲಾಖೆಯ ಗೌರವ ಮತ್ತು ಗಾಂಭೀರ್ಯಕ್ಕೆ ಸಲ್ಲದೆಂದು ಮುಖ್ಯಾಧಿಕಾರಿಗಳಾಗಿದ್ದ ಆಚಾರ್ಯರು ಸರ್ಕಾರದ ಗಮನಕ್ಕೆ ತಂದರು. ಸರ್ಕಾರದವರು ಅಯ್ಯನವರು ಮಾಡಿದ ಕೆಲಸ ಕ್ರಮಬದ್ಧವಲ್ಲವೆಂದು ಟೀಕಿಸಿ ಎಚ್ಚರಿಸಿದರು. ಇದರಿಂದ ಕ್ರುದ್ಧರಾದ ಅಯ್ಯನವರು ತಕ್ಷಣ ತಮ್ಮ ಕೆಲಸಕ್ಕೆ ರಾಜೀನಾಮೆ ಇತ್ತರು"[೧೦] ಎಂದು ಹೇಳುತ್ತಾರೆ.

ವೆಂಕಟಸುಬ್ಬಯ್ಯನವರ ಪ್ರಮುಖ ಗ್ರಂಥಗಳೆಂದರೆ,

1. The Kalas (1911)
2. Some S'aka Datas in Inscriptions: A contribution to India chronology (1918)
3. ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ (1927)
4. ವೇದಾರ್ಥ ಮಿಮಾಂಸೆ (1962) .. ಇತ್ಯಾದಿ

ಅಯ್ಯನವರು ಸಂಸ್ಕೃತ, ಪಾಲಿ–ಪ್ರಾಕೃತ, ತಮಿಳು, ಕನ್ನಡ, ಇಂಗ್ಲೀಷ್, ಜರ್ಮನ್, ಫ್ರೆಂಚ್, ಡಚ್ ಮೊದಲಾದ ಭಾಷೆಗಳಲ್ಲಿ ಪಾಂಡಿತ್ಯವನ್ನು ಹೊಂದಿದ್ದರು. ಪ್ರಪಂಚದ ಹಲವು ಭಾಗಗಳಲ್ಲಿ ಹಲವು ಭಾಷೆಗಳಲ್ಲಿದ್ದ ಪಂಚತಂತ್ರದ ಸಾಹಿತ್ಯವನ್ನು ಅಧ್ಯಯನ ಮಾಡಿ ಅದರ ಸ್ಥಾನಮಾನವನ್ನು ಗೊತ್ತು ಮಾಡುವ ಕೆಲಸದಲ್ಲಿ ತೊಡಗಿದ್ದರು. ಈ ಕೆಲಸದಿಂದಾಗಿ ವಿಶ್ವದ ಪಂಚತಂತ್ರ ಸಾಹಿತ್ಯಾಧ್ಯಯನದ ವಿದ್ವಾಂಸರಲ್ಲಿ ಮೊದಲ ಪಂಕ್ತಿಗೆ ಸೇರಿದವರಾಗಿದ್ದರು. ಯಾವುದೇ ದೇಶದ ವಿದ್ವಾಂಸರನ್ನೇ ಆಗಲಿ ನಿರ್ಭಿಡೆಯಿಂದ ಪ್ರಶ್ನಿಸುತ್ತಾರೆ.

**೫.೫. ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ: ಕವಿಚರಿತೆಯ ಜೊತೆ ಮುಖಾಮುಖಿ**

'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ' ಇದು ಒಂದು ಲೇಖನ ಮಾಲೆ. 'ಪ್ರಬುದ್ಧ ಕರ್ನಾಟಕ'ದಲ್ಲಿ ಪ್ರಕಟವಾಯಿತು. ನಂತರ ಪುಸ್ತಕರೂಪದಲ್ಲಿ 1927ರಲ್ಲಿ ಹೊರಬಂದಿತು. ಆರ್.ನರಸಿಂಹಾಚಾರ್ಯರ ಕರ್ನಾಟಕ ಕವಿಚರಿತೆಯ ಮೊದಲ ಎರಡು ಸಂಪುಟಗಳೇ ಇದಕ್ಕೆ ಪ್ರೇರಣೆ. ಈ ಲೇಖನ ಮಾಲೆಯನ್ನು ಬರೆಯಲು ಪ್ರಾರಂಭಿಸಿದಾಗ ಅವರು ಹೇಳಿಕೊಂಡ ಮಾತು ಇದನ್ನು ಸ್ಪಷ್ಟಪಡಿಸುತ್ತದೆ. ಮತ್ತು ಈ ಬರವಣಿಗೆಯ ಸ್ವರೂಪ ಮತ್ತು ತಾನು ಕಟ್ಟುವ ಚರಿತ್ರೆಯ ವಿನ್ಯಾಸವನ್ನು ಅನಾವರಣ ಮಾಡುತ್ತದೆ. "ಕನ್ನಡ ಕವಿಗಳ ಮತ್ತು ಕೃತಿಗಳ ವಿಷಯಗಳನ್ನು ಸುಮಾರಾಗಿ ಸಾಕಲ್ಯದಿಂದ ಪ್ರತಿಪಾದಿಸುವ ಗ್ರಂಥಗಳಲ್ಲಿ 'ಕರ್ನಾಟಕ ಕವಿಚರಿತೆ'ಯು ಪ್ರಧಾನವಾಗಿದ್ದು ಸರ್ವ ವಿದ್ವಜ್ಜನಗಳಿಂದಲೂ ಪ್ರಮಾಣಭೂತವೆಂದು ಅಂಗೀಕರಿಸಲ್ಪಟ್ಟಿರುವುದಷ್ಟೆ. ಈ ಕವಿಚರಿತೆಯಲ್ಲಿ ರಾಜಾದಿತ್ಯ ದುರ್ಗಸಿಂಹರೇ ಮೊದಲಾದ ಕೆಲವು ಕನ್ನಡ ಕವಿಗಳ

ಜೀವನಕಾಲದ ವಿಷಯವಾಗಿ ಪ್ರಕಟಿಸಲ್ಪಟ್ಟಿರುವ ಅಭಿಪ್ರಾಯಗಳು ಅಸಮರ್ಪಕವಾಗಿರುವುದರಿಂದ ಅವುಗಳನ್ನು ಮಾರ್ಪಡಿಸಿ, ಆ ಕವಿಗಳು ವಾಸ್ತವವಾಗಿ ಯಾವ ಕಾಲದಲ್ಲಿ ಜೀವಿಸುತ್ತಿದ್ದರೆಂಬುದನ್ನು ನಿರ್ಣಯಿಸಬೇಕೆಂಬ ಉದ್ದೇಶದಿಂದ ನಾನು ಈ ಲೇಖನವನ್ನು ಬರೆಯುವುದಕ್ಕೆ ಪ್ರವರ್ತಿಸಿದ್ದೇನೆ"[೧೧] ಎಂದು ಪ್ರಾರಂಭಿಸುತ್ತಾರೆ. ಈ ಮಾತುಗಳನ್ನು ಗಮನಿಸಿದಾಗ ಅಯ್ಯನವರ ಒಲವು ಯಾವ ಕಡೆಗೆ ಇದೆ ಎಂಬುದು ಬಹಳ ಸ್ಪಷ್ಟವಾಗುತ್ತದೆ. ಬಹು ಸಮಗ್ರವಾಗಿ ಈಗಾಗಲೇ ಕಿಟ್ಟೆಲ್, ಇ.ಪಿ. ರೈಸ್, ಆರ್. ನರಸಿಂಹಾಚಾರ್ಯ ಮೊದಲಾದವರು ಸ್ವತಂತ್ರವಾಗಿ ಕಟ್ಟುತ್ತಿದ್ದ ಸಾಹಿತ್ಯ ಚರಿತ್ರೆಯ ಒಂದು ಮಾದರಿಯಲ್ಲಿ ತಾನು 'ಚರಿತ್ರೆ'ಯನ್ನು ಕಟ್ಟುತ್ತಿಲ್ಲ. ಸಾಹಿತ್ಯ ಚರಿತ್ರೆಯ ಒಡಲಿನ ಅನೇಕ ಸಂಗತಿಗಳಲ್ಲಿ ಕವಿಯ ಹೆಸರು, ಮತ, ಕಾಲ, ಕೃತಿಗಳು ಪೂರ್ವದ ಕವಿಗಳ ಸ್ಮರಣೆ. ಕಾವ್ಯದ ವಸ್ತುಗಳೆಲ್ಲ ಸೇರಿಕೊಂಡಿರುತ್ತದೆ. ಆದರೆ ಅಯ್ಯನವರ ಗಮನ ಈ ಯಾವ ಸಂಗತಿಗಳಿಗಿಂತಲೂ ಕವಿಚರಿತೆಕಾರ ಪ್ರಕಟಿಸಿರುವ ಕೆಲವು ಕವಿಗಳ ಕಾಲದ ಉಲ್ಲೇಖ ನಿಖರವಾಗಿಲ್ಲ ಎಂಬ ಕಾರಣದಿಂದ ಆ ಕವಿಗಳು 'ವಾಸ್ತವವಾಗಿ' ಯಾವ ಕಾಲದಲ್ಲಿ ಜೀವಿಸುತ್ತಿದ್ದರು ಎಂಬುದನ್ನು ನಿರ್ಣಯಿಸುವ ಉದ್ದೇಶ ಮುಖ್ಯವಾದದ್ದು. ಸಾಹಿತ್ಯ ಚರಿತ್ರೆಯೊಂದು ಬಹು ಸ್ಪಷ್ಟವಾಗಿ 'ಕಾಲನಿರ್ಣಯ'ದ ಸಂಗತಿಯಾಗಲು ಇದ್ದ ಕಾರಣವೇನು? ಎನ್ನುವುದನ್ನು ಅವಲೋಕಿಸಿದರೆ, ಕವಿಚರಿತೆಕಾರ ಮತ್ತು ವೆಂಕಟಸುಬ್ಬಯ್ಯ ಇಬ್ಬರೂ ಕೆಲಸವನ್ನು ನಿರ್ವಹಿಸಿದ್ದು ಪುರಾತತ್ವ ಇಲಾಖೆಯಲ್ಲಿ. ಇದು ಶಾಸನಗಳು, ಕವಿಗಳು, ರಾಜರುಗಳ ಕಾಲದ ನಿಖರತೆಯನ್ನು ಗುರುತಿಸುವ ಕೆಲಸವನ್ನು ಮಾಡುವ ಇಲಾಖೆ. ಹೀಗಾಗಿ ಈ ಇಬ್ಬರಲ್ಲೂ ಕಾಲದ ಕಡೆಗಿನ ಗಮನ ಬಹುವಾಗಿದೆ. 'ಕಾಲನಿರ್ಣಯ'ವೇ ಇಲ್ಲಿ ಸಾಹಿತ್ಯ ಚರಿತ್ರೆಯಾಗಿದೆ. 63 ಜನ ಕವಿಗಳ ಬಗೆಗೆ ಸಮಸ್ಯೆಯನ್ನು ಎತ್ತಿ ವಿಚಾರ ವಿಮರ್ಶೆಯನ್ನು ನಡೆಸಿದ್ದಾರೆ. ಇದರಲ್ಲಿ ಪ್ರಮುಖ ಕವಿಗಳಿದ್ದಾರೆ. ಸಾಮಾನ್ಯ ಕವಿಗಳಿದ್ದಾರೆ. ಬರವಣಿಗೆಯ ಕ್ರಮ ಮೊದಲು ಕವಿಚರಿತೆಕಾರರ ಅಭಿಪ್ರಾಯಗಳಲ್ಲಿ ಯಥಾವತ್ತಾಗಿ ಉದ್ಧರಿಸಿ, ಬಳಿಕ ವಿಚಾರಕ್ಕೆ ತೊಡಗುವ ಪದ್ಧತಿಯನ್ನು ಇಲ್ಲಿ ಅನುಸರಿಸಲಾಗಿದೆ.

'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ' ಪ್ರಕಟವಾದ ಮೇಲೆ ಕನ್ನಡ ಸಾಹಿತ್ಯ ಚರಿತ್ರೆಯ ಅಭ್ಯಾಸಿಗಳಿಗೆ ಕರ್ನಾಟಕ ಕವಿಚರಿತೆಯಂತೆಯೇ ಇದೂ ಒಂದು ಉಪಯುಕ್ತವಾದ ಕೈಪಿಡಿಯಾಯಿತು. ಎರಡನ್ನೂ ಒಟ್ಟಿಗೆ ಓದಿದ್ದಲ್ಲದೆ ಸಾಹಿತ್ಯ ಚರಿತ್ರೆಯ ಅಧ್ಯಯನ ಸಮರ್ಪಕವಾಗಲಾರದು ಎಂಬ ಭಾವನೆಯು ಬೆಳೆದಿದೆ. ಈ ಕೃತಿಯ ಒಳಶಕ್ತಿಯನ್ನು ಗುರುತಿಸುವ ಜಿ. ವೆಂಕಟಸುಬ್ಬಯ್ಯನವರು "ಕನ್ನಡ ಸಾಹಿತ್ಯ ಚರಿತ್ರೆಯ ಅಭ್ಯಾಸ, ರಚನೆ ಇವುಗಳಲ್ಲಿ ಆಸಕ್ತರಾದವರಿಗೆ ಅಲ್ಲದೆ ಪ್ರಾಚೀನ ಸಾಹಿತ್ಯದ ಗ್ರಂಥ ಸಂಪಾದಕರಿಗೂ ಸಹ ಆ ಗ್ರಂಥದ ಪರಿಶೀಲನೆ ಅನಿವಾರ್ಯವಾಯಿತು. ಕವಿಗಳ ವಿಷಯದಲ್ಲಿ ಯಾವುದೇ ವಾದದ ಖಂಡನೆ

ಮಂಡನೆಗಳಿಗಾಗಿ, ಎಂದರೆ ಸಮರ್ಥನೆಯೇ ಇರಲಿ, ಭಿನ್ನಾಭಿಪ್ರಾಯವೇ ಇರಲಿ ಅಯ್ಯನವರ ಆ ಗ್ರಂಥವನ್ನು ಉಲ್ಲೇಖಿಸಿ, ಅವರ ವಿಚಾರ ವಿಮರ್ಶೆಯನ್ನು ಉದ್ಧರಿಸಿ, ತುಲನೆ ಮಾಡಿ ಬಳಿಕ ತಂತಮ್ಮ ನಿಲುವು ನಿರ್ಣಯಗಳಿಗೆ ತಲುಪುವುದು ಸಾಮಾನ್ಯವಾಯಿತು. ಇವೇ ಆ ಗ್ರಂಥದ ಹಿರಿಮೆ. ಅಯ್ಯನವರ ಹೆಗ್ಗಳಿಕೆ"[೧೨] ಎನ್ನುತ್ತಾರೆ. ಆ ಮೂಲಕ ಈ ಕೃತಿಯ ಸ್ಥಾನವನ್ನು ಸರಿಯಾಗಿಯೇ ನಿರ್ಣಯಿಸುತ್ತಾರೆ. ಡಿ.ಎಲ್. ನರಸಿಂಹಾಚಾರ್ಯರು ಇದೇ ಮಾತನ್ನು ಇನ್ನೊಂದು ರೂಪದಲ್ಲಿ ಹೇಳುತ್ತಾ, "ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ" ಎಂಬ ಗ್ರಂಥವಂತೂ ಕನ್ನಡ ಸಂಶೋಧನೆಯಲ್ಲಿ ನೂತನ ಮಾರ್ಗವನ್ನೇ ತೋರಿಸಿಕೊಟ್ಟಿತು ಎಂದು ಹೇಳುತ್ತಾ ಆ ಕೃತಿಯ ಮಹತ್ವವನ್ನು ನೆನೆಯುತ್ತಾರೆ. ಆ ಮೂಲಕ ಕರ್ನಾಟಕ ಕವಿಚರಿತೆ ಎಂಬ ಗ್ರಂಥ ಕನ್ನಡದ ಕವಿ–ಕಾವ್ಯ ಚರಿತೆಯ ಕೆಲವು ಅಂಶಗಳ ಅಧ್ಯಯನದಲ್ಲಿ ಏಕಮೇವಾದ್ವಿತೀಯವಾಗಿ ಉಳಿದು ಅದು ಉಂಟು ಮಾಡಬಹುದಾಗಿದ್ದ ಅಪಾರ್ಥಗಳನ್ನು ತಪ್ಪಿಸುವಲ್ಲಿ ಈ ಗ್ರಂಥ ನೆರವಾಯಿತು.

ಅಯ್ಯನವರು ಸಾಹಿತ್ಯ ಚರಿತ್ರೆಯನ್ನು ನಿರೂಪಿಸುವುದು ಕವಿಚರಿತೆಯನ್ನು ಎದುರಾಗಿಟ್ಟುಕೊಂಡು. ಕವಿಚರಿತೆಕಾರ ಕೆಲವು ಕವಿಗಳ ಕಾಲನಿರ್ಣಯ, ಕೃತಿ ಸಂಬಂಧಿ ಸಂಗತಿಗಳನ್ನು ಹೇಳುವಾಗ ವ್ಯಕ್ತಪಡಿಸಿದ ಅಭಿಪ್ರಾಯಗಳಿಗೆ ಪ್ರತಿಯಾಗಿ ಮಂಡಿಸಿದ ಕ್ರಮದಲ್ಲೇ ಅವರ ಸಾಹಿತ್ಯ ಚರಿತ್ರೆ ಇರುವುದು. ಹೀಗಾಗಿ ಇಲ್ಲಿನ ಮುಖ್ಯ ಚರ್ಚೆ ಕವಿಗಳ ಕಾಲದ ಕುರಿತಾಗಿರುವುದು. ಕವಿಯೊಬ್ಬನ ಕಾಲವನ್ನು ನಿರ್ಣಯಿಸುವುದಕ್ಕೆ ಲಭ್ಯವಿರುವ ಭಿನ್ನ ಆಕರಗಳನ್ನು ಇಟ್ಟುಕೊಂಡು ಕವಿಯ ಸಮಕಾಲೀನ ರಾಜಕೀಯ ಚರಿತ್ರೆಯನ್ನು ಆಧಾರವಾಗಿಟ್ಟುಕೊಂಡು ಇಲ್ಲಿನ ಚರ್ಚೆಗಳು ನಡೆದಿದೆ.

ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಬಗೆಯಲ್ಲೇ ನಿರೂಪಿತವಾದ ಸಾಹಿತ್ಯ ಚರಿತ್ರೆಯ ವ್ಯಾಖ್ಯಾನವನ್ನು ಇಲ್ಲಿ ಗಮನಿಸುವುದಾದರೆ, ಒಬ್ಬ ಕವಿಯನ್ನು ಕೃತಿಯನ್ನು ಅತ್ಯಂತ ನಿಖರವಾದ ಕಾಲಘಟ್ಟದಲ್ಲಿ ಇಟ್ಟುಕೊಂಡೇ ಜೋಡಿಸಿಕೊಂಡು ಹೋಗುವುದು. ಇಲ್ಲಿ ಸಾಹಿತ್ಯ ಚರಿತ್ರೆಗೆ ಇರಬಹುದಾದ ಸಾಮಾಜಿಕ ಹಾಗೂ ಇನ್ನಿತರ ಮುಖಗಳು ಗೌಣವಾಗಿ ಕಾಲಾನುಕ್ರಮಣಿಕೆಯ ನಿರೂಪಣೆಯೇ ಬಹು ಮುಖ್ಯವಾಗಿ ಬಿಡುತ್ತದೆ. ಶಿಲಾಲೇಖ, ಶಾಸನಗಳನ್ನಷ್ಟೇ ಸಾಹಿತ್ಯ ಚರಿತ್ರೆಯ ರಚನೆಯ ಆಕರಗಳನ್ನಾಗಿ ಬಳಸಿಕೊಂಡೇ ಅಯ್ಯನವರ ವಾದ ನಿರೂಪಿತವಾಗಿದೆ. ಇದರಿಂದಾಗಿ ಇದು ಕವಿ–ಕಾವ್ಯ ಚರಿತೆಯಾಗುವುದಕ್ಕಿಂತಲೂ ಕಾಲ ಚರಿತೆಯಾಗುತ್ತದೆ.

ಎ. ವೆಂಕಟಸುಬ್ಬಯ್ಯ ಮತ್ತು ಆರ್. ನರಸಿಂಹಾಚಾರ್ಯರ ನಡುವೆ ಸಂಭವಿಸಿದ ವಾಗ್ವಾದದ ಮಾದರಿಯಲ್ಲಿ ಈ ನಿರೂಪಣೆ ಇದೆ. ಕವಿಚರಿತೆಯ ಮೊದಲ ಎರಡು ಸಂಪುಟಗಳು ಪ್ರಕಟವಾದಾಗ ಅಲ್ಲಿ ಪ್ರಸ್ತಾಪಿತವಾದ ಕವಿಗಳಲ್ಲಿ ಅದರಲ್ಲೂ ಪ್ರಥಮ ಸಂಪುಟದ ಕವಿಗಳಲ್ಲಿ

ಕೆಲವರ ಕಾಲದ ಕುರಿತು ಆಕ್ಷೇಪಣೆಗಳನ್ನು ಎತ್ತಿದ್ದರು. ಮುಂದೆ ಕವಿಚರಿತೆಯ ಮೂರನೇ ಸಂಪುಟ ಪ್ರಕಟವಾದಾಗ ಅದರಲ್ಲಿ ವೆಂಕಟಸುಬ್ಬಯ್ಯನವರ ಆಕ್ಷೇಪಣೆಗಳು ಎಂಬ ಭಾಗದಲ್ಲಿ ಅವರ ಆಕ್ಷೇಪಣೆಗಳಿಗೆ ಉತ್ತರವನ್ನೂ, ಸಮಾಧಾನವನ್ನು ನೀಡಲು ಯತ್ನಿಸುತ್ತಾರೆ. ಈ ಮೂರನೆಯ ಸಂಪುಟ ಪ್ರಕಟವಾದ ನಂತರ ಅದರಲ್ಲಿ ಕವಿಚರಿತೆಕಾರ ನೀಡಿರುವ ಸಮಾಧಾನಗಳಿಂದ ತೃಪ್ತರಾಗದೆ ಮತ್ತೆ 'ಆಕ್ಷೇಪಗಳಿಗೆ ಪ್ರತ್ಯುಕ್ತಿ' ಎಂದು ಹೇಳಿ ತನ್ನ ಪ್ರತಿಕ್ರಿಯೆಗಳನ್ನು ಪ್ರಕಟಿಸಿದರು. ಹೀಗೆ ಈ ವಾಗ್ವಾದ ಕನ್ನಡದ ವಿದ್ವತ್ ಕ್ಷೇತ್ರಕ್ಕೆ ಒಂದು ಬಹುಮುಖ್ಯ ಕೊಡುಗೆಯಾಗಿದೆ.

ಈ ಮಾದರಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕಟ್ಟಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಹೊಸತು. ಒಂದು ಅಭಿಪ್ರಾಯಕ್ಕೆ ಸರ್ವಮಾನ್ಯತೆ ಸಿಗಬಹುದಾಗಿದ್ದ ಸಂದರ್ಭದಲ್ಲಿ ಅದರೊಳಗಿನ ಲೋಪಗಳನ್ನು ಎತ್ತಿತೋರಿಸುವ ಕ್ರಮ ಬಹುಶಃ ಸಾಹಿತ್ಯ ಚರಿತ್ರೆಯ ಬೆಳವಣಿಗೆಯ ದೃಷ್ಟಿಯಿಂದ ಬಹು ಮುಖ್ಯವಾಗುತ್ತದೆ. ಒಂದೊಂದು ಸಾಹಿತ್ಯ ಚರಿತ್ರೆಯ ಮಿತಿಗಳನ್ನು ಮೀರುವ ಪ್ರಯತ್ನದಲ್ಲೇ ಕನ್ನಡದಲ್ಲಿ ಬಹು ವಿಸ್ತಾರವಾದ ಮತ್ತು ಅರ್ಥದ ಬಹುನೆಲೆಗಳ ಸಾಹಿತ್ಯ ಚರಿತ್ರೆ ಕೃತಿಗಳು ಬಂದಿರುವುದು. ಅಯ್ಯನವರ ವಿಚಾರಗಳನ್ನು ಕವಿಚರಿತೆಕಾರ ಕೆಲವು ಕಡೆ ಒಪ್ಪಿಕೊಂಡಿದ್ದಾರೆ. ಇನ್ನೂ ಕೆಲವು ಸಂದರ್ಭದಲ್ಲಿ ಒಪ್ಪಿಕೊಳ್ಳುವುದಕ್ಕೆ ಆಗದೇ ಇರುವ ಕಾರಣಗಳನ್ನು ನೀಡಿ ನಿರಾಕರಿಸಿದ್ದಾರೆ. ಅವರು "ದುರ್ಗಸಿಂಹ, ಚಂದ್ರರಾಜ, ರಾಜಾದಿತ್ಯ, ವೃತ್ತವಿಲಾಸ ಈ ಕವಿಗಳಿಗೆ ನಾನು ಹೇಳಿರುವ ಕಾಲದ ವಿಷಯದಲ್ಲಿಯೂ ಕೆಲವರು ಜೈನಗುರುಗಳ ನಾಮಸಾಮ್ಯದಿಂದ ನಾನು ಮಾಡಿರುವ ಸಮೀಕರಣದ ವಿಷಯದಲ್ಲಿಯೂ ಅಯ್ಯನವರು ಹೇಳಿರುವ ಆಕ್ಷೇಪಣೆಗಳು ನ್ಯಾಯವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ"[೧೩] ಎಂಬುದಾಗಿ ಮುಕ್ತ ಮನಸ್ಸಿನಿಂದಲೇ ಒಪ್ಪಿಕೊಂಡಿದ್ದಾರೆ. ಆದರೆ ಅಯ್ಯನವರು ಈ ಸಂಗತಿಗಳನ್ನು ಓದಿದ ಮೇಲೆಯೂ ಕೂಡ "ಉಕ್ತ ಕವಿಗಳಿಗೆ ನಾನು ಹೇಳಿರುವ ಕಾಲವೇ ಸರಿಯೆಂದೂ, ಮ|| ಆಚಾರ್ಯರು ಹೇಳಿರುವ ಕಾಲವು ತಪ್ಪಾದುದೆಂದೂ ನನಗೆ ತೋರುವುದರಿಂದ ಅವರು ನನ್ನ ಲೇಖನದ ಮೇಲೆ ಮಾಡಿರುವ ಆಕ್ಷೇಪಣೆಗಳ ಮತ್ತು ಅವರ ಸಮಾಧಾನಗಳ ವಿಚಾರವಾಗಿ ನಾನು ಇಲ್ಲಿ ಕೆಲವು ಪಂಕ್ತಿಗಳನ್ನು ಬರೆಯುತ್ತೇನೆ"[೧೪] ಎಂದು ಹೇಳುತ್ತಾ ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ ಆಕ್ಷೇಪಗಳಿಗೆ ಪ್ರತ್ಯುಕ್ತಿ ಎಂಬ ಇನ್ನೊಂಡು ಪ್ರತಿಕ್ರಿಯೆಯನ್ನು ಬರೆಯುತ್ತಾರೆ.

ಅಯ್ಯನವರ ನಿರೂಪಣೆಯ ಕ್ರಮದಲ್ಲೇ ಒಂದು ಆಕ್ರಮಣಕಾರಿ ಪ್ರವೃತ್ತಿ ಇದೆ. ಈ ಪ್ರವೃತ್ತಿಯಲ್ಲಿ ಪಶ್ಚಿಮ ಪ್ರಣೀತವಾದ ವಿಜ್ಞಾನದಿಂದ ಪ್ರಭಾವಿತವಾದ ಕಾಲ ನಿಖರತೆಯ ಆಧಾರದಲ್ಲಿ ಕಟ್ಟುವ ಚರಿತ್ರೆಯ ಪರಿಕಲ್ಪನೆ ಇದೆ. ಇದು ಕೃತಿಯ ಉದ್ದಕ್ಕೂ ಮಂಡಿತವಾದ ರೀತಿ. ಎದುರಿಗೆ ಕವಿಚರಿತೆಯನ್ನು ಇಟ್ಟುಕೊಂಡು ಅದನ್ನು ಖಂಡಿಸುವ ಅಲ್ಲಿ ಸೂಚಿತವಾದ ಕಾಲವನ್ನು ತಪ್ಪು

ಎಂದು ತೋರಿಸಿಕೊಡುವ ಬಗೆಯದ್ದು. ಕವಿಚರಿತೆಕಾರನಿಗೆ ತಾನು ಕಟ್ಟುವ ಕವಿಚರಿತೆಯ ಸಂದರ್ಭದಲ್ಲಿ ಇಲ್ಲದೇ ಇದ್ದ ಒಂದು ಒತ್ತಡ ಇಲ್ಲಿ ಅಯ್ಯನವರಿಗೆ ಇದೆ. ಹಾಗಾಗಿ ಇವರಿಬ್ಬರ ನಿರೂಪಣೆಯಲ್ಲಿ ಈ ಬಗೆಯ ಭಿನ್ನತೆ ಇದೆ.

ಇಡೀ ಕೃತಿಯ ಉದ್ದಕ್ಕೂ ರಾಜಚರಿತ್ರೆಯೇ ಇಲ್ಲ ಪ್ರಧಾನ. ಅದಕ್ಕನುಗುಣವಾಗಿ ಕವಿಚರಿತೆ ನಿರೂಪಿತಗೊಳ್ಳುತ್ತದೆ. ಎಫಿಗ್ರಾಫಿಯ ಇಂಡಿಕಾ, ಎಫಿಗ್ರಾಪಿಯ ಕರ್ನಾಟಿಕಗಳು, ಡಾ। ಫ್ಲೀಟ್, ಡಾ।ಹುಲ್ಷ್, ಬಿ.ಎಲ್. ರೈಸ್ ಮೊದಲಾದವರಿಂದ ಶೋಧಿತವಾಗಿ ಪ್ರಕಟವಾದ ಶಾಸನ ಸಂಪುಟಗಳೇ ಇವರು ತಾವು ಮಂಡಿಸುವ ವಾದಕ್ಕೆ ಆಧಾರವಾಗಿ ಪರಿಗಣಿಸುತ್ತಾರೆ. ಕಾಲ ನಿಬದ್ಧವಾದ ನೆಲೆಯಲ್ಲಿ ಒಂದು ಸಾಹಿತ್ಯ ಚರಿತ್ರೆ ರಚನೆಯಾಗಬೇಕು. ಅಲ್ಲಿ ಇನ್ನಾವುದೇ ಸಾಮಾಜಿಕ, ಧಾರ್ಮಿಕ ಸಂಗತಿಗಳಾಗಲಿ, ಕವಿಯ ಕೃತಿಯನ್ನು ಒಳಹೊಕ್ಕು ಅದನ್ನು ವಿಶ್ಲೇಷಿಸಿದಾಗ ಅದು ನಿರೂಪಿಸುವ ಒಂದು ಸಾಮಾಜಿಕ ಬದುಕನ್ನು, ಎಲ್ಲೂ ಉಲ್ಲೇಖ ಮಾಡುವುದಿಲ್ಲ. ಅವರೆಲ್ಲ ಗಮನ ಕಾಲ ನಿರೂಪಣೆಯಲ್ಲೇ ಕಳೆದಿದೆ.

ಸಾಹಿತ್ಯ ಚರಿತ್ರೆಯ ಸ್ವರೂಪವನ್ನು ಅಯ್ಯನವರು ತನ್ನ ನಿರೂಪಣೆಯ ಕ್ರಮದಲ್ಲೇ ನೀಡಿದ್ದಾರೆ. ಅವರು ಕವಿಚರಿತೆಗೆ ನೀಡಿದ ಪ್ರತಿಕ್ರಿಯೆಯ ತೀಕ್ಷ್ಣತೆಯಿಂದ ಅದು ಅನುಭವವಾಗುತ್ತದೆ. ಕವಿಚರಿತೆಕಾರ 'ಕವಿಚರಿತೆ' ಎಂಬ ಪರಿಕಲ್ಪನೆಯನ್ನು ಗ್ರಹಿಸಿದ ಕ್ರಮದ ಬಗೆಗೆಯೇ ಬಹಳ ಮೂಲಭೂತವಾದ ಪ್ರಶ್ನೆಗಳನ್ನು ಎತ್ತುತ್ತಾರೆ. ಆ ಗ್ರಹಿಕೆಯ ಹಿಂದಿರುವ ಮಿತಿಯನ್ನು ಎತ್ತಿ ತೋರಿಸುತ್ತಾರೆ. ಕವಿಚರಿತೆಕಾರ 'ಕವಿಚರಿತೆ' ಪರಿಕಲ್ಪನೆಯನ್ನು ಗ್ರಹಿಸಿದ ಕ್ರಮ ತೀರಾ ಸರಳವಾದ್ದು ಎಂಬುದನ್ನು ಹೇಳಲು ಅಯ್ಯನವರ ವಿಚಾರವನ್ನು ಇಲ್ಲಿ ಪ್ರಸ್ತಾಪಿಸಬಹುದು.

ಕವಿಚರಿತೆಯಿಂದ ಅಯ್ಯನವರು ಎತ್ತಿಕೊಂಡು ತೋರಿಸುವ ಕೆಲವು ಸಾಲುಗಳನ್ನು ಇಲ್ಲಿ ನಿದರ್ಶನಕ್ಕಾಗಿ ನೀಡಬಹುದು:

> "ಹಾವಿನ ಹಾಳ ಕಲ್ಲಯ್ಯ ಸು. 1150: ಈತನು ತನ್ನನ್ನು ಕಚ್ಚಿ ಸತ್ತ ಹಾವನ್ನು ಬದುಕಿಸಿದನು. ನಾಯಿಂದ ವೇದವನ್ನು ಹೇಳಿಸಿದನು. (ಬಸವ ಪುರಾಣ ಸಂದಿ 55) ಇವನ ವಚನಗಳ ಸಂಖ್ಯೆ 58, ಇವುಗಳಲ್ಲಿ ಮಹಾಲಿಂಗ ಕಲ್ಲೇಶ್ವರ ಎಂಬ ಅಂಕಿತವಿದೆ" (ಪುಟ 204).
>
> ಏಲೇಶ್ವರದ ಕೇತಯ್ಯ, ಸು. 1150: ಈತನು ಭವಿಸಂಪರ್ಕವೇ ಇಲ್ಲದೆ ಇರಲು ದ್ವೇಷಿಗಳು ಇವನ ಕಣಜಕ್ಕೆ ಬೆಂಕಿಯನ್ನು ಉರಿಸಿ ಬಿಟ್ಟಾಗ ಬೆಂದ ಬೀಜವನ್ನೇ ಬಿತ್ತಿ ಬೆಳೆದನು. ಇವನ ವಚನಗಳ ಸಂಖ್ಯೆ 200. ಇವುಗಳಲ್ಲಿ ರಾಮೇಶ್ವರಲಿಂಗ ಅಥವಾ ಏಲೇಶ್ವರಲಿಂಗ ಎಂಬ ಅಂಕಿತವಿದೆ" (ಪುಟ 203).

ಕಾಳವ್ವೆ, ಸು. 1160: ಈಕೆ ಕಗ್ಗಲ್ಲಿನಿಂದ ಹಾಲನ್ನು ಕರೆದು ಈಶ್ವರನಿಗೆ ಉಣಿಸಿದಳು" (ಪುಟ 197)

"ಸೊಡ್ಡಳ ಬಾಚರಸ ಸು. 1160: ಈತನು ವಚನಗಳನ್ನು ಬರೆದಿದ್ದಾನೆ. ಒಂದು ಕಾಲಜ್ಞಾನವನ್ನು ಬರೆದಿರುವಂತೆ ತೋರುತ್ತದೆ. ಇವನು ವೀರಶೈವ ಕವಿ, ಬಿಜ್ಜಳರಾಜನಲ್ಲಿ (1156–1167) ಕರಣಿಕನಾಗಿದ್ದನು. ಈತನು ಸುಳ್ಳು ಲೆಕ್ಕವನ್ನು ಬರೆದನೆಂದು ಕೊಂಡೆಯರು ದೊರೆಯಲ್ಲಿ ದೂರಲು, ಬಸವನು ಸೂರ್ಯಗತಿಯನ್ನು ಹನ್ನೊಂದು ದಿವಸ ನಿಲ್ಲಿಸಿ ಲೆಕ್ಕವನ್ನೆ ಪೂರ್ತಿಮಾಡಿ ತೋರಿಸಿದಂತೆಯೂ ಬಿಜ್ಜಳನು ಇಬ್ಬರನ್ನೂ ಮನ್ನಿಸಿದಂತೆಯೂ ಇತಿಹಾಸವಿದೆ. ಇವನ ವಚನಗಳಲ್ಲಿ 'ಸೊಡ್ಡಳ' ಎಂಬ ಅಂಕಿತವಿದೆ" (ಪುಟ 187).

ಹೀಗೆ ಯಾವುದೋ ಒಂದು ಸಂದರ್ಭದಲ್ಲಿ ಸೃಷ್ಟಿಯಾಗಿರುವ ಪವಾಡದ ಕಥೆಗಳನ್ನು ಚರಿತೆಯಾಗಿ ಪರಿಗಣಿಸಿದ್ದು ಕವಿಚರಿತೆಕಾರನ ಮಿತಿ. ಇದಕ್ಕೆ ಅಯ್ಯನವರು ತೋರಿಸಿದ ಪ್ರತಿಕ್ರಿಯೇ ತೀಕ್ಷ್ಣವಾದದ್ದು. ಈ ಮೇಲಿನ ಉದಾಹರಣೆಗಳನ್ನು ಉಲ್ಲೇಖಿಸಿ "ಇವು ಎಂತಹ ಚರಿತ್ರೆಗಳು! ಇವೆಲ್ಲವೂ ವಾಸ್ತವವೆಂದೂ ಮೇಲೆ ಹೇಳಿದ ಈ ಕವಿಗಳು ಕ್ರಿ.ಶ. ಸುಮಾರು 1160ರಲ್ಲಿ ಇದ್ದು ಮೇಲೆ ಹೇಳಿದ ಕೆಲಸಗಳನ್ನು ಮಾಡಿರುವರೆಂದು ಭಾವಿಸಿ ಕವಿಚರಿತೆಕಾರರು ಇಂಥ ಚರಿತ್ರೆಗಳನ್ನು ತಮ್ಮ ಗ್ರಂಥದಲ್ಲಿ ಸೇರಿಸಿಕೊಂಡಿರುವುದನ್ನು ನೋಡಿದರೆ ನಾವು ಆಶ್ಚರ್ಯ ಪಡಬೇಕೋ ಅಥವಾ ಕವಿಚರಿತೆಕಾರರ ಹೃದಯದ ಸರಳಭಾವವನ್ನು ಸ್ತುತಿಸಬೇಕೋ ಎಂದು ಏನೂ ನಮಗೆ ತೋಚುವುದಿಲ್ಲ"[೧೫] ಎನ್ನುತ್ತಾರೆ. ಕವಿಚರಿತೆಕಾರರು 'ಕವಿಚರಿತೆ'ಯನ್ನು ನೋಡುವ ದೃಷ್ಟಿಕೋನದ ಬಗೆಗೆ ಇವರು ತನ್ನ ಅಸಮಾಧಾನವನ್ನು ವ್ಯಕ್ತಪಡಿಸುತ್ತಾರೆ. ಯಾವುದೋ ಒಂದು ಕಾವ್ಯದಲ್ಲಿ ಅಥವಾ ಕವಿಯೊಬ್ಬ ಹೇಳುವ ಪವಾಡದ ಮಾತುಗಳನ್ನು ಚರಿತೆಯಾಗಿ ಕಟ್ಟಬಹುದೆ? ಇದು ಇಲ್ಲಿನ ಮೂಲಭೂತ ಪ್ರಶ್ನೆ. ಪವಾಡದ ಕತೆಗಳನ್ನು ವಾಸ್ತವ ಎಂದು ನಂಬಿ ಬಿಡಬೇಕೆ? ಇದು ಕವಿ ಚರಿತೆಯಾಗುತ್ತದೆಯೇ? ಎಂಬುದು ಇಲ್ಲಿ ಚರ್ಚೆಯ ಸಂಗತಿ.

ಈ ಚರ್ಚೆ ಎರಡು ಭಿನ್ನ ಪರಂಪರೆಯ ನಡುವಿನ ಸಂಘರ್ಷ ಒಂದು ದೇಶಿಯವಾಗಿ ಕಾವ್ಯವೇ ಕಟ್ಟಿಕೊಂಡ ಒಂದು ಚರಿತ್ರೆ ಮಾದರಿಯ ಪುರಾಣ ಲೋಕ ಹಾಗೂ ಇನ್ನೊಂದು ಈ ಪುರಾಣಗಳಲ್ಲಿ 'ಚರಿತ್ರಾರ್ಹ'ವಾದ ಸಂಗತಿಗಳಿಗಾಗಿ ಶೋಧಿಸುವ ವಿಜ್ಞಾನ ಪ್ರೇರಿತ ಆಧುನಿಕತೆಯ ನಿಖರ ಮತ್ತು ಸತ್ಯ ಎಂಬಲ್ಲಿಂದ ಹೊರಡುವ ಹೊಸತನ ಚರಿತ್ರೆಯ ಕಲ್ಪನೆ ಇವುಗಳ ನಡುವಿನ ಸಂಘರ್ಷ ಇದು. ಈ ಸಂಘರ್ಷ ಸಾಧ್ಯವಾದಷ್ಟು ತಾನು 'ನಂಬಲರ್ಹವಾದ ಜ್ಞಾನ' ವನ್ನು ಕಟ್ಟಿಕೊಳ್ಳುವ ಶೋಧಿಸುವ ನೆಲೆಯಲ್ಲಿರುತ್ತದೆ. ಈ ಹಿನ್ನೆಲೆ ಅಯ್ಯನವರ ಮಾತಿನಲ್ಲಿ ವ್ಯಕ್ತವಾಗುತ್ತದೆ. ".... ಹೀಗೆ ಇಂಥ ಉದ್ದೇಶದಿಂದ ಇಷ್ಟು ಶ್ರಮಪಟ್ಟು ಕವಿಚರಿತೆಕಾರರು ತಮ್ಮ ಗ್ರಂಥವನ್ನು

ಬರೆದಿರುವುದರಿಂದ ಬಸವ ಪುರಾಣ, ರಾಘವಾಂಕ ಚರಿತ್ರೆ ಮೊದಲಾದ ಮೇಲೆ ಹೇಳಿದ ವೀರಶೈವ ಗ್ರಂಥಗಳ ಕರ್ತೃಗಳೂ ತಮ್ಮ ತಮ್ಮ ಗ್ರಂಥಗಳಲ್ಲಿ ಕೀರ್ತಿತರಾಗಿರುವ ನೂತನ ಮತ್ತು ಪುರಾತನರೇ ಮೊದಲಾದವರ ಚರಿತ್ರೆಗಳನ್ನು ತಮ್ಮಂತೆಯೇ ಬಹುಶ್ರಮಪಟ್ಟು ಸಂಶೋಧನೆ ಮಾಡಿ ಯಥಾವತ್ತಾಗಿ ಗೊತ್ತು ಮಾಡಿ ವರ್ಣಿಸಿರುವರೆಂದು ಭಾವಿಸಿ ಅವರು ಆ ಚರಿತ್ರೆಗಳನ್ನು ಕವಿಚರಿತೆಯಲ್ಲಿ ಸೇರಿಸಿದಂತೆ ತೋರುವುದು"[೧೮] ಎನ್ನುತ್ತಾರೆ.

ಒಂದು ಪುರಾಣವನ್ನು ಕಟ್ಟುವ ಮಾದರಿಯ ಈ ಚರಿತೆಗಳಲ್ಲಿ ಐತಿಹಾಸಿಕ ದೃಷ್ಟಿಯಿಲ್ಲಿ ಅದನ್ನು ಯಥಾವತ್ತಾಗಿ ಚರಿತೆ ಎಂದು ಹೇಳಲು ಸಾಧ್ಯವಿಲ್ಲ. ಈ ತಿಳುವಳಿಕೆ ಕವಿಚರಿತೆಕಾರನಿಗೆ ಇಲ್ಲ ಎಂಬುದನ್ನು ಅಯ್ಯನವರು ಹೇಳುತ್ತಾರೆ. ಕವಿಚರಿತೆಕಾರ ಮತ್ತು ಅಯ್ಯನವರು ಇಬ್ಬರೂ ಪುರಾತತ್ವ ಇಲಾಖೆಯಲ್ಲಿ ಕೆಲಸವನ್ನು ನಿರ್ವಹಿಸಿದರು. ಐತಿಹಾಸಿಕ ಸಂಗತಿಗಳು ಯಾವುದು ಎಂಬುದನ್ನು ಶೋಧಿಸಲು ಇಬ್ಬರೂ ಸಮರ್ಥರೇ. ಬಹುಶಃ ಈ ಸಂಘರ್ಷ ಪುರಾಣವನ್ನೇ ಚರಿತೆಯಾಗಿ ಗ್ರಹಿಸಿಕೊಂಡಿದ್ದ ದೇಶಿಯರ ತಿಳುವಳಿಕೆಯಿಂದ ಪಶ್ಚಿಮದ ಮಾದರಿಯ ಚಾರಿತ್ರಿಕ ಪರಿಕಲ್ಪನೆಗಳ ಪ್ರವೇಶದ ನಂತರ ನಿಖರವಾದ ಒಂದು ಚರಿತೆ ಇದೆ, ಪುರಾಣದಲ್ಲಿ ಐತಿಹಾಸಿಕತೆ ಇಲ್ಲ ಎಂಬ ತಿಳುವಳಿಕೆಯಿಂದ ಹೊರಟ ಹೊಸ ಕಾಲದ ಚಿಂತನೆಯ ನಡುವಿನ ಸಂಘರ್ಷವಾಗಿ ಗ್ರಹಿಸಬೇಕು. ಅಯ್ಯನವರು ಕಾಲ, ವಿಚಾರಗಳ ನಿಖರತೆಯನ್ನು ಬಯಸುವ ಪಶ್ಚಿಮದ ವಿಜ್ಞಾನದ ಮಾದರಿಯಿಂದ ಪ್ರೇರಣೆ ಪಡೆದಂತೆ ತೋರಿದರೆ, ನರಸಿಂಹಾಚಾರ್ಯರು ಪುರಾಣ ಮಾದರಿಯಲ್ಲಿ ಕಥೆಯನ್ನು ಚರಿತ್ರೆ ಎಂದು ಹೇಳುವ ರೀತಿಯಿಂದ ಪ್ರಭಾವಿತರಾದಂತೆ ಇದೆ. ಅಯ್ಯನವರು ಎತ್ತಿದ ಈ ಪ್ರಶ್ನೆ ಒಂದು ಸಾಹಿತ್ಯ ಚರಿತ್ರೆಯ ಸ್ವರೂಪದ ಬಗೆಗಿನ ಬಹಳ ಮೂಲಭೂತವಾದ ಪ್ರಶ್ನೆಯಾಗುತ್ತದೆ. ಕಾವ್ಯವನ್ನೇ, ಸಾಹಿತ್ಯ ಚರಿತೆಯ ಮೊದಲ ಆಕರ ಎಂದು ತಿಳಿದು ಕಾವ್ಯ ಕೊಡುವ ಇಂತಹ ಸಂಗತಿಗಳನ್ನು ಯಥಾವತ್ ನಿರೂಪಿಸುವುದು, ಚರಿತ್ರೆಗೆ ಇರುವ ನಂಬಲರ್ಹತೆಯ ಪ್ರಶ್ನೆಯ ಸಂದರ್ಭದಲ್ಲಿ ಸಾಧ್ಯವಾಗಲಾರದು. ಇದನ್ನು ಅಯ್ಯನವರು ಅರ್ಥಮಾಡಿಕೊಂಡು ಅಂದಿನ ಸಂದರ್ಭದಲ್ಲಿ ಚರಿತ್ರೆಗೆ ಬಹಳ ನಂಬಿಕೆಯ ಆಕರವಾದ ಶಾಸನಗಳ ಮೊರೆ ಹೊಕ್ಕಂತೆ ಇದೆ. ಮುಂದೆ ಈ ಶಾಸನಗಳ ಅಧಿಕೃತತೆಯ ಬಗೆಗೂ ಪ್ರಶ್ನೆಗಳು ಬಂದದ್ದು ಅಧ್ಯಯನ ಕ್ರಮದ ಪಲ್ಲಟವನ್ನು ಸೂಚಿಸುತ್ತದೆ.

ಅಯ್ಯನವರು ಕಟ್ಟಿದ ಒಟ್ಟು ಸಾಹಿತ್ಯ ಚರಿತ್ರೆಯ ಕ್ರಮವೇ ಸಂವಾದದ ನೆಲೆಯದ್ದು. ಕವಿಚರಿತೆಕಾರನ ವಾದಕ್ಕೆ ಪ್ರತಿವಾದ ಇವರದ್ದು. ಹಾಗಾಗಿ ಇವರ ಸಾಹಿತ್ಯ ಚರಿತ್ರೆಗೆ ಆಧಾರ ಕವಿಚರಿತೆ. ಕವಿಚರಿತೆ ಹುಟ್ಟದಿದ್ದರೆ ಇವರ ಕೃತಿಯೂ ಇರುತ್ತಿರಲಿಲ್ಲ. ಕವಿಚರಿತೆಯ ಲೋಪಗಳು ಇವರ ಚರಿತೆಯ ವಸ್ತು. ಹೀಗಾಗಿ ಇದೊಂದು ವಿಶಿಷ್ಟ ಬಗೆಯ ಚರಿತೆ. ಕವಿಚರಿತೆಕಾರನಲ್ಲಿ

ಸಂಭವಿಸಿದ ತಪ್ಪುಗಳು ಎಂದು ತಾನು ಕಂಡುಕೊಂಡ ಸಂಗತಿಗಳು ತನ್ನ ಚರಿತೆಯ ವಸ್ತು. ಇದರಿಂದಾಗಿ ಅಯ್ಯನವರಿಗೆ ಒಟ್ಟು ಸಾಹಿತ್ಯ ಚರಿತ್ರೆಯನ್ನು ಸಮಗ್ರವಾಗಿ ಕಟ್ಟಬೇಕು ಎಂದೇನಿಲ್ಲ. ಅಲ್ಲಿ ಕವಿಗಳನ್ನು ಮತಕ್ಕನುಸಾರವಾಗಿ ವಿಂಗಡಿಸಬೇಕಾದ ಸಂದರ್ಭವೂ ಬಂದಿಲ್ಲ. ಕಾಲಾನುಕ್ರಮಣಿಕೆಯಲ್ಲಿ ಒಬ್ಬನ ನಂತರ ಒಬ್ಬನನ್ನು ಜೋಡಿಸುವ ಶ್ರಮವೂ ಅವರಿಗಿಲ್ಲ. ಅವರದ್ದೇನಿದ್ದರೂ ಪ್ರತಿವಾದ. ಕವಿಚರಿತೆಕಾರನಲ್ಲಿ ತನಗೆ ಸರಿಕಾಣದೆ ಇದ್ದ ಕವಿಗಳ ಬಗೆಗೆಯಷ್ಟೇ ಇವರ ತಕರಾರು. ಕವಿಚರಿತೆಕಾರನ ಚರಿತ್ರೆಯನ್ನು ಕಟ್ಟುವ ವಿನ್ಯಾಸದ ಬಗೆಗೆ ಅದರ ರೂಪದ ಬಗೆಗೆ ಯಾವ ತಕರಾರೂ ಇಲ್ಲ. ಈ ಕಾಲಘಟ್ಟದಲ್ಲಿ ಸಂಭವಿಸಿದ ಬಹುದೊಡ್ಡ ಸಂವಾದದ ಮಾದರಿ ಇದು. ಆದರೆ ಈ ಮಾದರಿ ಕಿಟ್ಟೆಲ್ – ರೈಸ್‌ರನ್ನಾಗಲಿ, ರೈಸ್ – ನರಸಿಂಹಾಚಾರ್ಯರನ್ನಾಗಲಿ ಕಾಡಲಿಲ್ಲ. ಮುಂದೆಯೂ ಇಂತಹದ್ದೊಂದು ಗಂಭೀರ ಪ್ರತಿಕ್ರಿಯೆಯ ಮಾದರಿಯಲ್ಲಿ ಸಾಹಿತ್ಯ ಚರಿತ್ರೆ ಹುಟ್ಟಲಿಲ್ಲ.

ದೇಶಿಯ ಪಂಡಿತ ಪರಂಪರೆಯ ಒಂದು ಕೊಂಡಿಯಾಗಿಯೂ ನಾವು ಅಯ್ಯನವರಲ್ಲಿ ಈ ಸಂಗತಿಯನ್ನು ಅಷ್ಟು ಸರಳವಾಗಿ ಗ್ರಹಿಸುವುದು ಸಾಧ್ಯವಾಗಲಾರದು. ಅಯ್ಯನವರ ಪ್ರತಿವಾದ ಕವಿಚರಿತೆಕಾರನು ಮಂಡಿಸಿದ ವಿಷಯಗಳ ಕುರಿತಾಗಿ ಎತ್ತಿದ ಪ್ರಶ್ನೆಗಳಾಗಿದೆಯೇ ಹೊರತು, ಕವಿಚರಿತೆಕಾರ ಪ್ರತಿಸಂಪುಟದಲ್ಲೂ ಒಂದೊಂದು ಅವತರಣಿಕೆಗಳನ್ನು ನೀಡಿ ಈ ನಾಡಿನ ಒಂದು ಐಡೆಂಟಿಟಿಯನ್ನು ಮನರ್ರೂಪಿಸಲು ಮಾಡುತ್ತಿರುವ ಪ್ರಯತ್ನದ ಕುರಿತು ಮೌನವಾಗಿದ್ದಾರೆ. ತನ್ನ ವಾದಗಳ ನಡುವೆ ಎಲ್ಲೂ ಕೂಡ, ಈ ನಾಡಿನ, ನುಡಿಯ ಪ್ರಾಚೀನತೆಯನ್ನಾಗಲಿ, ಅವರ ಮೌಲ್ಯಗಳನ್ನಾಗಲಿ ಎಲ್ಲೂ ಉಲ್ಲೇಖಿಸುವುದಿಲ್ಲ. ಈ ಪ್ರಾಚೀನತೆಯನ್ನು ಸಾಧಿಸಿ ತೋರಿಸುವುದಕ್ಕಾಗಿ ಕವಿಚರಿತೆ ಅನೇಕ ಬಗೆಯ ಪ್ರಯತ್ನಗಳನ್ನು ಮಾಡುತ್ತಿದ್ದಾಗಲೇ ಅಯ್ಯನವರು ಅವರ ಬಗೆಗೆ ಮೌನಿಯಾಗುತ್ತಾರೆ. ಅಯ್ಯನವರ ಈ ಮಾದರಿಯು ಅನೇಕ ಬಗೆಯ ಲೋಪಗಳನ್ನು ಕೂಡ ಹೊಂದಿದೆ. ಮುಖ್ಯವಾಗಿ ಕವಿಚರಿತೆಕಾರನನ್ನು ತಾನು ಒಪ್ಪದಿರುವ ಸಂಗತಿಗಳಿಗಾಗಿ ತನ್ನ ಪ್ರತಿಕ್ರಿಯೆಯನ್ನು ತಿಳಿಸಲು ಹುಟ್ಟಿಕೊಂಡ ಈ ಚರಿತ್ರೆ ತನ್ನ ವಾದವನ್ನು ಮಂಡಿಸುವಲ್ಲಿಯೇ ತನ್ನ ಗಮನವನ್ನು ಕೇಂದ್ರೀಕರಿಸಿದೆಯೇ ವಿನಾ ಅದು ಸಮಗ್ರ ಸಾಹಿತ್ಯ ಪರಂಪರೆಯ ಚಲನೆಯನ್ನು ಗ್ರಹಿಸುವಲ್ಲಿ ಸೋತಿದೆ ಎನ್ನಬೇಕಾಗುತ್ತದೆ. ಪ್ರತಿವಾದಿಯ ಎಲ್ಲಾ ಉತ್ಸಾಹಗಳು ವಾದವನ್ನು ಸೋಲಿಸಲು ಎದುರು ಹಾಕಿಕೊಂಡಂತೆ ಇದೆಯೇ ಹೊರತು ವಾದಕ್ಕಿಂತ ಹೊರತಾಗಿ ಸಾಹಿತ್ಯ ಚರಿತ್ರೆಯನ್ನು ಒಂದು ಕ್ರಮದಲ್ಲಿ ಗ್ರಹಿಸದೆ ಹೋಯಿತು.

ಕಿಟ್ಟೆಲ್, ರೈಸ್ ಮತ್ತು ನರಸಿಂಹಾಚಾರ್ಯರ ಚರಿತೆಯನ್ನು ಕಟ್ಟುವ ತಾತ್ವಿಕ ಸ್ವರೂಪದಲ್ಲಿ ಸಾಮ್ಯತೆ ಇದೆ. ಅಂತಹ ತಾತ್ವಿಕ ಸ್ವರೂಪ ಯಾವುದೆಂದರೆ, ಕನ್ನಡ ನಾಡು-ನುಡಿಯ, ಸಾಹಿತ್ಯದ ಉಗಮದ ಆರಂಭದ ಕಾಲಘಟ್ಟವನ್ನು ಗುರುತಿಸಿ ಅದು ಹೇಗೆ ವಿಕಾಸಗೊಳ್ಳುತ್ತಾ

ಸಂಕೀರ್ಣಗೊಳ್ಳುತ್ತಾ ಬಂದಿತು ಎಂಬುದನ್ನು ಈ 3 ಜನ ವಿದ್ವಾಂಸರೂ ಸ್ಪಷ್ಟವಾಗಿಯಲ್ಲದಿದ್ದರೂ ಒಂದು ಮಾದರಿಯಲ್ಲಿ ಗ್ರಹಿಸಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಆದರೆ ಅಯ್ಯನವರಲ್ಲಿ ಈ ತಾತ್ವಿಕತೆ ಇಲ್ಲ. ಅವರಿಗೆ ಕನ್ನಡದ ಕಾವ್ಯಾರಂಭ ಎಲ್ಲಿಂದ ಪ್ರಾರಂಭವಾಯಿತು? ಯಾರಿಂದ ಪ್ರಾರಂಭವಾಯಿತು? ಅದರ ಭಾಷಾ ಸ್ವರೂಪ, ಕಾಲಘಟ್ಟಗಳ ನಡುವಿನ ಪಲ್ಲಟವನ್ನು ಗುರುತಿಸುವ ಕುರಿತು ಯಾವುದೇ ಆಸಕ್ತಿ ಇರಲಿಲ್ಲ.

ಕವಿಯ ಕಾಲವನ್ನು ನಿಖರವಾಗಿ ಗುರುತಿಸಲು ತೊಡಗಿದಷ್ಟು ಕವಿಯ ಕೃತಿಯ ಮೂಲಕ ಕಟ್ಟಬಹುದಾದ ಒಂದು ಸಾಮಾಜಿಕ ಚರಿತ್ರೆಯನ್ನು ಕಟ್ಟುವಲ್ಲಿ ಅಯ್ಯನವರ ಪ್ರಯತ್ನ ಇಲ್ಲ. ಕವಿಚರಿತೆಕಾರನೂ ಇದಕ್ಕೆ ಪೂರ್ತಿ ಹೊರತಲ್ಲ. ಅಯ್ಯನವರ ವಾದದ ಸ್ವರೂಪವನ್ನು ನೋಡಿದಾಗ ಅವರ ಬರವಣಿಗೆ ವಸಾಹತುಶಾಹಿಯ ತೀವ್ರ ಪ್ರಭಾವದ ಒಂದು ಉತ್ಪನ್ನವಾಗಿ ಕಾಣುತ್ತದೆ. ಅದಕ್ಕೆ ವಸಾಹತಿನ ಜೊತೆ ಯಾವ ಸಂಘರ್ಷವೂ ಇಲ್ಲ. ವಸಾಹತುವಿನಿಂದ ಬಿಡುಗಡೆಯನ್ನು ಪಡೆಯುವ ಇಚ್ಛೆಯೂ ಇಲ್ಲ, ಅವರ ಕುರಿತು ಮೌನವೇ ಇದೆ. ಆದರೆ ಕವಿಚರಿತೆಕಾರನಿಗೆ ತನ್ನ ಭಾಷೆಯ, ನಾಡಿನ ಚರಿತ್ರೆಯನ್ನು ಕಟ್ಟುವ ಕ್ರಮದಲ್ಲೇ ಒಂದು ಬಿಡುಗಡೆಯನ್ನು ಪಡೆಯುವ ಕ್ರಮ ಇದೆ. ಅದು ಮಾತಿನಲ್ಲಿ ಇಲ್ಲದಿರಬಹುದು. ಆದರೆ ಅದು ಬರವಣಿಗೆಯ ಕ್ರಮದಲ್ಲಿದೆ. ತಾನು ತನ್ನ ನಾಡಿನ ರಾಜರ ಚರಿತೆಯನ್ನು ಮಾತನಾಡುವಾಗ, ಇಲ್ಲಿನ ಮತೀಯ ಸಾಮರಸ್ಯವನ್ನು ಕುರಿತು ಉಲ್ಲೇಖಿಸುವಾಗ 'ಪರ'ದ ವರ್ತಮಾನದಿಂದ 'ಸ್ವ' ವನ್ನು ಬಿಡುಗಡೆಗೊಳಿಸುವ ಕ್ರಮ ಇದೆ. ಹಾಗಾಗಿ ಇದು ವಸಾಹತಿನ ಪರಿಣಾಮ ಪ್ರಭಾವಗಳೆರಡರಿಂದಲೂ ವಸಾಹತಿನ ಮಾದರಿಯಲ್ಲೇ ತನ್ನ ಯೋಚನೆಗಳನ್ನು ನಿರೂಪಿಸುವ ಮೂಲಕ ಬೌದ್ಧಿಕವಾಗಿ ಬಿಡುಗಡೆಯನ್ನು ಪಡೆಯುವ ಕ್ರಮದಲ್ಲಿದೆ. ವಸಾಹತಿನ ಮಾದರಿಯಲ್ಲೇ ಉತ್ತರಿಸುತ್ತಾ, ವಸಾಹತಿನಿಂದ ಕಳಚಿಕೊಳ್ಳುವ ಒಂದು ತಾತ್ವಿಕ ಮಾದರಿ ಇದು ಎಂದು ಹೇಳಬಹುದು.

# ಸಂದರ್ಭ ಸೂಚಿ


೧. ಆರ್. ನರಸಿಂಹಾಚಾರ್ಯ, ಕರ್ನಾಟಕ ಕವಿಚರಿತೆ: ದ್ವಿತೀಯ ಸಂಪುಟ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1973, ಪುಟ 23.

೨. ಆರ್. ನರಸಿಂಹಾಚಾರ್ಯ, ಕರ್ನಾಟಕ ಕವಿಚರಿತೆ: ಪ್ರಥಮ ಸಂಪುಟ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1972, ಪುಟ 13.

೩. ಅದೇ.. .. ಪುಟ 13

೪. ಇ.ಪಿ. ರೈಸ್: (ಅನು: ಸಂಗಮನಾಥ ಜಿ. ಹಂಡಿ, ಕುಮಾರಿ ಪೌಲೀನ ನಂದಗಾಂವ) ಕನ್ನಡ ಸಾಹಿತ್ಯ ಚರಿತ್ರೆ, ಶರತ್ ಪ್ರಕಾಶನ ಮೈಸೂರು 1975, ಪುಟ 8.

೫. ಆರ್. ನರಸಿಂಹಾಚಾರ್ಯ, ಕರ್ನಾಟಕ ಕವಿಚರಿತೆ: ದ್ವಿತೀಯ ಸಂಪುಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1973, ಪುಟ 26.

೬. ಅದೇ .. .. ಪುಟ 27

೭. ಅದೇ .. .. ಪುಟ 22

೮. ಅದೇ .. .. ಪುಟ 27

೯. ಅದೇ .. .. ಪುಟ 48

೧೦. ಎನ್. ಅನಂತರಂಗಾಚಾರ್ಯ, ರಾ। ನರಸಿಂಹಾಚಾರ್ಯ: ಜೀವನ ಮತ್ತು ಕಾರ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1971, ಪುಟ 40.

೧೧. ಡಾ। ಟಿ.ವಿ. ವೆಂಕಟಾಚಲಶಾಸ್ತ್ರಿ (ಸಂ) ಡಾ। ಎ. ವೆಂಕಟಸುಬ್ಬಯ್ಯನವರ ಸಂಶೋಧನಾ ಲೇಖನಗಳು, ಕನ್ನಡ ಪುಸ್ತಕ ಪ್ರಾಧಿಕಾರ, 2001, ಪುಟ 5

೧೨. ಅದೇ .. .. ಪುಟ XXXXIII

೧೩. ಆರ್. ನರಸಿಂಹಾಚಾರ್ಯ, ಕರ್ನಾಟಕ ಕವಿಚರಿತೆ: ಸಂಪುಟ –3 ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1974, ಪುಟ XXXVIII

೧೪. ಡಾ। ಟಿ.ವಿ. ವೆಂಕಟಾಚಲಶಾಸ್ತ್ರಿ (ಸಂ) ಡಾ।ಎ. ವೆಂಕಟಸುಬ್ಬಯ್ಯನವರ ಸಂಶೋಧನಾ ಲೇಖನಗಳು, ಕನ್ನಡ ಪುಸ್ತಕ ಪ್ರಾಧಿಕಾರ, 2001 ಪುಟ 230.

೧೫. ಅದೇ .. .. .. ಪುಟ 221

೧೬. ಅದೇ .. .. .. ಪುಟ 221

# ಅಧ್ಯಾಯ ಆರು

## ೬.೦ ಸಾಹಿತ್ಯ ಚರಿತ್ರೆ : ಬದಲಾದ ಗ್ರಹಿಕೆ

೬.೧ ಪ್ರವೇಶ

೬.೨ ಸಾಹಿತ್ಯ ಚರಿತ್ರೆಯ ಸಾಹಿತ್ಯದ ಗ್ರಹಿಕೆ

೬.೩ ಸಾಹಿತ್ಯ ಚರಿತ್ರೆ ಕಟ್ಟಿದ ಪೂರ್ವ– ಪಶ್ಚಿಮ ಜ್ಞಾನ ಸಂಬಂಧ

# ೬. ಸಾಹಿತ್ಯ ಚರಿತ್ರೆ: ಸಾಹಿತ್ಯ ಮತ್ತು ಚರಿತ್ರೆಯ ಬದಲಾದ ಗ್ರಹಿಕೆ

## ೬. ೧ ಪ್ರವೇಶ

ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಬಹಳ ಮೂಲಭೂತವಾದ ಉದ್ದೇಶ ಏನು ಎಂದು ನಮ್ಮ ಈವರೆಗಿನ ಸಾಹಿತ್ಯ ಚರಿತ್ರೆಗಳು ಹೇಳಿಕೊಂಡಿಲ್ಲ. 'ಸಾಹಿತ್ಯ' ಯಾವುದು? ಎನ್ನುವುದರ ಕುರಿತು ನಮ್ಮಲ್ಲಿ ಅನೇಕ ಬಗೆಯ ನಿರ್ವಚನಗಳು ಇವೆ. ಕಾಲದಿಂದ ಕಾಲಕ್ಕೆ ಸಾಹಿತ್ಯದ ರೂಪ, ಭಾಷೆ ಪಡೆದುಕೊಂಡ ಹೊಸತನಗಳಂತೆ ಸಾಹಿತ್ಯ ಎಂದರೆ ಏನು? ಯಾವುದು ಸಾಹಿತ್ಯ? ಎಂಬ ಪ್ರಶ್ನೆಗೂ ಉತ್ತರಗಳು ಬದಲಾಗುತ್ತಾ ಹೋಗಿದೆ. ಸಾಹಿತ್ಯ ಕೃತಿಯನ್ನು ಅರ್ಥೈಸಿಕೊಳ್ಳಲು ಪಠ್ಯ ಮಾತ್ರ ಸಾಕೆ? ಅಥವಾ ಕೃತಿಯ ಕರ್ತೃ, ಕೃತಿ ರಚನೆಗೊಂಡ ಕಾಲ, ಪರಿಸರದ ಒತ್ತಡಗಳು ಕೃತಿಯ ಅರ್ಥವನ್ನು ರೂಪಿಸುತ್ತದಾ? ಎಂಬ ಪ್ರಶ್ನೆಯೂ ನಮ್ಮ ಕಾಲದಲ್ಲಿ ಬದಲಾಗುತ್ತಾ ಬಂದಿದೆ.

'ಸಾಹಿತ್ಯ ಚರಿತ್ರೆ' ಸಾಹಿತ್ಯವನ್ನು ಅರಿಯುವುದಕ್ಕಾಗಿಯೊ? ಅಥವಾ ಸಾಮಾಜಿಕ ರಾಜಕೀಯ ಚರಿತ್ರೆಯನ್ನು ಅರಿತುಕೊಳ್ಳುವುದಕ್ಕಾಗಿಯೇ ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ. ಹಾಗೂ ಸಾಹಿತ್ಯವನ್ನು 'ಸಾಹಿತ್ಯ ಚರಿತ್ರೆ' ಗ್ರಹಿಸಿಕೊಂಡ ಬಗೆ ಯಾವುದು? ಮತ್ತು ಸಾಹಿತ್ಯ ಚರಿತ್ರೆಯನ್ನು ಪೂರ್ವದ ಸಂಬಂಧದ ಜೊತೆಗೆಯೇ ಕಟ್ಟಿಕೊಂಡಿದ್ದರಿಂದ ಈ ಸಾಹಿತ್ಯ ಚರಿತ್ರೆ ಪೂರ್ವ ಮತ್ತು ಪಶ್ಚಿಮದ ಜ್ಞಾನ ಸಂಬಂಧವನ್ನು ಹೇಗೆ ನಿರೂಪಿಸಿದೆ ಎಂಬುದನ್ನು ಇಲ್ಲಿ ನೋಡಲಾಗುವುದು.

## ೬.೨ ಸಾಹಿತ್ಯ ಚರಿತ್ರೆಯ ಸಾಹಿತ್ಯದ ಗ್ರಹಿಕೆ:

ಸಾಹಿತ್ಯ ಮತ್ತು ಚರಿತ್ರೆಗೆ ಇರುವ ಸಂಬಂಧ, ಚರಿತ್ರೆ ಮತ್ತು ಸಾಹಿತ್ಯದ ಅಭಿವ್ಯಕ್ತಿ ಇವುಗಳ ಕುರಿತು ವ್ಯಾಪಕವಾದ ಚರ್ಚೆ ನಡೆದಿದೆ. ಸಾಹಿತ್ಯ ಮತ್ತು ಚರಿತ್ರೆಗೆ ಇರುವ ಸಂಬಂಧವನ್ನು ಬೇರೆ ಬೇರೆ ದೃಷ್ಟಿಕೋನದಲ್ಲಿ ವಿವರಿಸಿಕೊಳ್ಳಬಹುದು. ಒಂದು ದೃಷ್ಟಿಕೋನ ಸಾಹಿತ್ಯವು ಚರಿತ್ರೆಯನ್ನು ಅವಲಂಬಿಸಿದ್ದು ಎಂದು ಭಾವಿಸಿದರೆ, ಇನ್ನೊಂದು ದೃಷ್ಟಿಯು ಚರಿತ್ರೆ ಮತ್ತು ಸಾಹಿತ್ಯಗಳ ಸಂಬಂಧ ಅನಿವಾರ್ಯವಲ್ಲ ಎಂದು ತಿಳಿಯುತ್ತದೆ. ಚರಿತ್ರೆಯನ್ನು ತಿಳಿಯದೆಯೂ ಸಾಹಿತ್ಯದ ಚರ್ಚೆಯನ್ನು ನಡೆಸಬಹುದು. ಪಠ್ಯ ಮತ್ತು ಸಂದರ್ಭಕ್ಕೆ ಇರುವ ಸಂಬಂಧವೇ ಸಾಹಿತ್ಯ ಮತ್ತು ಚರಿತ್ರೆಗೆ ಇರುತ್ತದೆ. ಚರಿತ್ರೆಯು ಅಧಿಕೃತವಾದುದು ಮತ್ತು ಅಧಿಕೃತತೆಯನ್ನು ತಂದು ಕೊಡುವಂತಹುದು ಎಂಬ ತಿಳುವಳಿಕೆ ಚರಿತ್ರೆಯ ಗ್ರಹಿಕೆಯ ಹಿಂದೆ ಇದೆ. ಚರಿತ್ರೆಯನ್ನು ಗ್ರಹಿಸುವ ಸಾಂಪ್ರದಾಯಿಕ ದೃಷ್ಟಿಕೋನವು ಚರಿತ್ರೆಯೆಂದರೆ ಸಂಸ್ಕೃತಿಯೊಂದರ ಏಳಿಎಳೆಯನ್ನು ಸುಸಂಬದ್ಧವಾದ ಕಥನವಾಗಿ ನಿರೂಪಿಸುವುದು ಎಂದು ಅರ್ಥೈಸುತ್ತಿತ್ತು. ಸಾಹಿತ್ಯಿಕ ಅಧ್ಯಯನದ ಸಂದರ್ಭದಲ್ಲಿ ಕೃತಿಯನ್ನು ಅದರ ಚಾರಿತ್ರಿಕ ಸಂದರ್ಭದಲ್ಲಿಟ್ಟು ನೋಡುವುದೆಂದರೆ ಆ

ಕೃತಿಯ ಕಲಾತ್ಮಕ ಅಂಶಗಳನ್ನು ಮೀರಿ ಮಿಕ್ಕ ಸಂಗತಿಗಳನ್ನು ಗಮನಕ್ಕೆ ತಂದುಕೊಳ್ಳುವುದು ಎಂದರ್ಥವಾಗುತ್ತದೆ. ಸಾಹಿತ್ಯ ಕೃತಿಗಳಿಗೆ ಒಂದು ಚರಿತ್ರೆಯನ್ನು ಕಟ್ಟುವುದು ಯಾವಾಗಲೂ ತಮ್ಮ ಸಮಕಾಲೀನ ಅಪೇಕ್ಷೆ ಮತ್ತು ಸಾಮಾಜಿಕ ಒತ್ತಡಗಳ ಫಲವಾಗಿಯೇ ರೂಪುಗೊಂಡಿರುತ್ತದೆ.

'ಸಾಹಿತ್ಯ ಚರಿತ್ರೆ' ಎಂದರೆ 'ಸಾಹಿತ್ಯದ ಚರಿತ್ರೆ'ಯೋ ಅಥವಾ 'ಸಾಹಿತ್ಯದಲ್ಲಿ ಚರಿತ್ರೆಯೋ' ಎಂಬ ಪ್ರಶ್ನೆಯನ್ನು ಹುಟ್ಟು ಹಾಕಿಸುತ್ತದೆ. ಸಾಹಿತ್ಯ ಚರಿತ್ರೆಯಲ್ಲಿ ಸಾಹಿತ್ಯ ಕೃತಿಗಳನ್ನು 'ಸ್ಥಗಿತ'ಗೊಂಡಂತೆ ಪ್ರಕ್ರಿಯ ರಹಿತವಾದಂತೆ ತಿಳಿದುಕೊಂಡು ಜೋಡಿಸಿದಾಗ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಕೆಲಸ ಕೃತಿಗಳ ಅಥವಾ ಕವಿಗಳ 'ಕಾಲಬದ್ಧ' ನೆಲೆಯಲ್ಲಿ ಶೋಧಿಸಿ ಜೋಡಿಸಿದಂತಾಗುತ್ತದೆ. ಸಾಹಿತ್ಯ ಚರಿತ್ರೆಯು ಸಾಹಿತ್ಯವನ್ನು ಗ್ರಹಿಸುವ ಕ್ರಮವನ್ನು ನೋಡಿದರೆ ಇಲ್ಲಿ ಸಾಹಿತ್ಯ ಕೃತಿಗಳನ್ನು ಸ್ಥಗಿತವಾದವುಗಳೆಂಬಂತೆ ಗ್ರಹಿಸಲಾಗುತ್ತದೆ.

ಸಾಹಿತ್ಯ ಚರಿತ್ರೆಯ ಕೇಂದ್ರ ಉದ್ದೇಶ 'ಲೇಖಕನ ಇಂಗಿತದ ಮನಾರಚನೆ'ಯಾಗಬೇಕು. ಇದು ಕಟ್ಟುವ ಚರಿತ್ರೆಯೊಂದು ಸಾಹಿತ್ಯದ ಕೃತಿಯನ್ನು ಹೇಗೆ ಗ್ರಹಿಸುತ್ತದೆ ಎಂಬುದರ ಮೇಲಿದೆ. ಸಾಹಿತ್ಯ ಚರಿತ್ರಕಾರ ತಾನು ಕಟ್ಟುವ ಚರಿತ್ರೆಯಲ್ಲಿ ತನಗೆ ಲಭ್ಯವಾದ ಕೃತಿಯ ಅಗಾಧ ಮಾಹಿತಿ ಅಥವಾ ಪದ್ಯ/ಗದ್ಯ ರಾಶಿಯಿಂದ ಆಯ್ಕೆಮಾಡಿಕೊಂಡು ಆ ಕಾಲದ ಪ್ರತಿನಿಧಿತ್ವವನ್ನು ತನ್ನ ಚರಿತ್ರೆಯಲ್ಲಿ ತೋರಿಸುವುದಕ್ಕಾಗಿ ಒಂದೆರಡು ಪದ್ಯಗಳನ್ನು ನೀಡುತ್ತಾನೆ. ಹೀಗೆ ಆಯ್ಕೆ ಮಾಡುವ ಮೂಲಕ ಕಟ್ಟುವ ಚರಿತ್ರೆಯಲ್ಲಿ ಮುನ್ನೆಲೆಗೆ ತರುವ ಸಂಗತಿ ಎಂದರೆ ಚರಿತ್ರಕಾರನ ಧೋರಣೆ ಏನು ಎನ್ನುವುದನ್ನು.

ಸಾಹಿತ್ಯ ಚರಿತ್ರೆ ಸಾಹಿತ್ಯವನ್ನು ಸಾತತ್ಯದ ನೆಲೆಯಲ್ಲಿ ಸಂಯೋಜಿಸಿಕೊಳ್ಳುತ್ತದೆ. ಒಬ್ಬ ಕವಿ, ಒಂದು ಕೃತಿ ಒಂದು ಕಾಲದ ಸೃಷ್ಟಿಯಾಗಿಯೂ ಆ ಕವಿ ಪ್ರತಿಭೆಯು ಹಿಂದಿನದರ ಮುಂದುವರಿಕೆಯಾಗಿಯೋ ಅಥವಾ ಈ ಕಾಲಘಟ್ಟ ಮುಂದಿನ ಕಾಲಘಟ್ಟದ ಮೇಲೆ ಉಂಟು ಮಾಡಿರುವ ಪ್ರಭಾವವನ್ನೋ ಕವಿ–ಕೃತಿಗಳ ಆಧಾರದಲ್ಲಿ ಕಟ್ಟುತ್ತದೆ. ಸಾಹಿತ್ಯ ಸೃಷ್ಟಿ ಬಿಡಿಬಿಡಿಯಾಗಿಯೇ ನಡೆದಿರುತ್ತದೆ. ಆದರೆ ಈ ಬಿಡಿಬಿಡಿ ರಚನೆಯ ಹಿಂದೆ ಒಂದು ಪರಂಪರೆ ಇರುತ್ತದೆ ಎಂದು ಸಾಹಿತ್ಯ ಚರಿತ್ರೆ ಗ್ರಹಿಸುವುದರಿಂದ, ಆ ಕಾವ್ಯ ಪರಂಪರೆ ಅಖಂಡ ಪರಂಪರೆಯಾಗಿ ಹೇಗೆ ಹರಿದುಕೊಂಡು ಬಂದಿದೆ ಎಂಬುದರ ಆಧಾರದಲ್ಲಿ ತಾನೊಂದು ಚರಿತ್ರೆಯನ್ನು ಕಟ್ಟುತ್ತದೆ.

ಸಾಹಿತ್ಯ ಚರಿತ್ರೆ 'ಚರಿತ್ರೆ'ಯ ಸಂಗತಿಯಾದ 'ಗತ'ದ ಜೊತೆಗೆ ಮಾಡುವ ಒಂದು ಅನುಸಂಧಾನ. ಸಾಹಿತ್ಯಕ್ಕೆ ಗತದ ಕುರಿತು ಹೆಚ್ಚೇನೂ ಆಸಕ್ತಿ ಇಲ್ಲ. ಗತದ ಕುರಿತ ಆಸಕ್ತಿ ಇರುವುದು ಚರಿತ್ರೆಗೆ. ಒಂದು ವೇಳೆ ಸಾಹಿತ್ಯಕ್ಕೆ ಈ ರೀತಿಯಾಗಿ ಗತದ ಆಸಕ್ತಿ ಇರುವುದಾದರೆ, ತಾನೇ ಒಂದು ಪರಂಪರೆಯಾಗಿ ತನ್ನ ಗತವನ್ನು ಸಂಯೋಜಿಸುತ್ತಾ ಮುಂದುವರಿಯುತ್ತಿತ್ತು. ಆದರೆ

ಹೀಗಾಗಿಲ್ಲ. ಸಾಹಿತ್ಯಕ್ಕೆ ಒಂದು ಗತವನ್ನು ಕಟ್ಟುವ ಪ್ರಯತ್ನ ನಡೆದದ್ದು ಆಧುನೀಕತೆಯು, ಪಶ್ಚಿಮದ ಮೂಲಕ ಪ್ರವೇಶವಾದ ಜೊತೆಗೆ. ಚರಿತ್ರೆಗೆ ಸಹಜವಾಗಿಯೇ ಗತದ ಕುರಿತು ಆಸಕ್ತಿ ಇರುವುದರಿಂದ ಗತವನ್ನು ಅದು ವೈಭವದ ನೆಲೆಯಲ್ಲಿ ಪುನಾರಚಿಸುತ್ತಾ ಹೋಗುತ್ತದೆ. ಚರಿತ್ರೆ ಗತವನ್ನು ತಿರಸ್ಕರಿಸುವುದಿಲ್ಲ, ಆದರೆ ಸಾಹಿತ್ಯ ತಿರಸ್ಕರಿಸಬಲ್ಲದು ಮತ್ತು ಹೀಗೆ ತಿರಸ್ಕರಿಸುವ ಮೂಲಕ ತಾನೇ ಒಂದು ಹೊಸ ಪರಂಪರೆಯನ್ನು ಸೃಷ್ಟಿಸಬಲ್ಲದು. ತನಗಿಂತ ಹಿಂದಿನ ಪರಂಪರೆಯನ್ನು ತಾನು ನಿರಾಕರಿಸುತ್ತಲೇ ಹೊಸದನ್ನು ಕಟ್ಟಿಕೊಳ್ಳುವ ಶಕ್ತಿ ಸಾಹಿತ್ಯಕ್ಕಿದೆ. ಸಾಹಿತ್ಯ ಚರಿತ್ರೆಯು ಈ ಸೂಕ್ಷ್ಮ ಸೆಳೆಗಳನ್ನು ಗುರುತಿಸಲು ಸಾಧ್ಯವಾಗಬೇಕು. ಚರಿತ್ರೆಯನ್ನು ಕಟ್ಟುವ ಸಂದರ್ಭದಲ್ಲಿ ವರ್ತಮಾನದ ಕುರಿತು ಇರುವ ಗ್ರಹಿಕೆ ಸಾಮಾನ್ಯವಾಗಿ ಆಪ್ತವಾಗಿರುವುದಿಲ್ಲ. ವರ್ತಮಾನದ ಹಳಹಳಿಕೆಯೇ 'ಚರಿತ್ರೆ'ಯನ್ನು ಕಟ್ಟುವುದು. ವರ್ತಮಾನದಲ್ಲಿ ಇಲ್ಲದಿರುವ ಒಂದು ವೈಭವವನ್ನು ಚರಿತ್ರೆಯಲ್ಲಿ 'ಶೋಧಿಸಿ' ಕಟ್ಟುತ್ತದೆ. ಈ 'ಶೋಧನೆ' ಸಹಜವಾಗಿಯೇ ವರ್ತಮಾನದಲ್ಲಿ ಇಲ್ಲ ಎಂಬ ಗ್ರಹಿಕೆಯಿಂದ ಹೊರಟು, ಗತವನ್ನು ತನ್ನೆದುರು ಮೂರ್ತಗೊಳಿಸಿಕೊಂಡು ನಡೆಯುವ ನೆಲೆಯಿಂದ ಬಂದಿರುತ್ತದೆ.

ಸಾಹಿತ್ಯ ಚರಿತ್ರೆಯ ಶೋಧಗಳು ಚರಿತ್ರೆಯನ್ನು ಕಟ್ಟುತ್ತಲೇ ಅದು ವರ್ತಮಾನಕ್ಕಿಂತ ಭಿನ್ನವಾದದ್ದು ಮತ್ತು ಶ್ರೇಷ್ಠವಾದದ್ದು ಎಂಬ ತಿಳುವಳಿಕೆಯನ್ನು ಹೊಂದಿರುತ್ತದೆ. ನಿದರ್ಶನಾತ್ಮಕವಾಗಿ ನೋಡುವುದಾದರೆ ಕರ್ನಾಟಕ ಕವಿಚರಿತೆ, ಕರ್ನಾಟಕದ, ಕನ್ನಡ ಭಾಷೆಯ ಪ್ರಾಚೀನತೆಯನ್ನು ಮನನ ಮಾಡಿಕೊಂಡ ಬಗೆ. ಕನ್ನಡದ ಮಹಿಮೆಯನ್ನು, ಹಿರಿಮೆಯನ್ನು ಹೇಳಿಕೊಂಡಷ್ಟು ವರ್ತಮಾನಕ್ಕೆ ಅಲ್ಲಿ ಸ್ಥಳ ಇಲ್ಲ. ಏಕೆಂದರೆ ವರ್ತಮಾನದಲ್ಲಿ ಅದು ಇಲ್ಲ, ಇಲ್ಲದಿರುವುದನ್ನು ನೆನಪು ಮಾಡಿಕೊಳ್ಳುವುದಕ್ಕಾಗಿ ಚರಿತ್ರೆಯನ್ನು ಕಟ್ಟಲಾಗುತ್ತದೆ. ಕನ್ನಡಿಗರಿಗೆ ತಮ್ಮ ನಾಡು ನುಡಿಗಳಲ್ಲಿ ಗೌರವ ಬುದ್ಧಿಯೂ, ಆದರಾತಿಶಯವೂ ಹುಟ್ಟಿ ಅವುಗಳ ಏಳಿಗೆಗಾಗಿ ಉತ್ಸಾಹದಿಂದೊಡಗೂಡಿದ ಪ್ರಯತ್ನವು ಉಂಟಾಗಬೇಕೆಂದು ತಾನು ಈ ಕವಿಚರಿತೆಯನ್ನು ಕಟ್ಟುತ್ತಿರುವ ವಿಷಯವನ್ನು ನರಸಿಂಹಾಚಾರ್ಯರು ಹೇಳಿಕೊಳ್ಳುತ್ತಾರೆ. ಅಂದರೆ ಇದು ವರ್ತಮಾನದಲ್ಲಿ ಇಲ್ಲದಿರುವಂತಹದು. ಹಾಗಾಗಿ ಅದನ್ನು ಮರಳಿ ಪಡೆಯಬೇಕಾದರೆ ಗತಕ್ಕೆ ಹೊರಳಿಕೊಳ್ಳಬೇಕು.

ಸಾಹಿತ್ಯ ಕೃತಿಗಳು ಚಾರಿತ್ರಿಕ ಉತ್ಪನ್ನವಲ್ಲ. ಅದು ತತ್ಕಾಲಿನ ಉತ್ಪನ್ನ. ಅದನ್ನು ಒಂದು ಚಾರಿತ್ರಿಕ ಉತ್ಪನ್ನವಾಗಿ ಗ್ರಹಿಸಿದ ಪರಿಣಾಮ ಕವಿ ಅಥವಾ ಕೃತಿಗಳನ್ನು ಒಂದು ಕಾಲಬದ್ಧವಾಗಿ ಚಾರಿತ್ರಿಕ ಬೆಳವಣಿಗೆಯ ಮಾದರಿಯಲ್ಲಿ ಸಾಹಿತ್ಯ ಚರಿತ್ರೆ ಸಂಯೋಜಿಸಿಕೊಳ್ಳುತ್ತದೆ. ಚರಿತ್ರೆ ಕೃತಿಕಾರನ ಉದ್ದೇಶವಲ್ಲ. ಚರಿತ್ರಕಾರನ ಅಗತ್ಯ. ಲೇಖಕನೊಬ್ಬ ಕೃತಿಯ ಮೂಲಕ ತನ್ನ ಸಮಕಾಲೀನ ಉದ್ದೇಶವೊಂದನ್ನು ನೆರವೇರಿಸಿದ್ದಾನೆ ಎಂದುಕೊಂಡರೆ ಸಾಹಿತ್ಯ ಚರಿತ್ರೆ ರೂಪುಗೊಳ್ಳಲಾರದು.

ಸಾಹಿತ್ಯದ ಒಳಗೆ ಅಕ್ಷರಶಃ ನೂರಾರು ಸ್ವತಂತ್ರವಾದ, ವಿಭಿನ್ನವಾದ ಪರಸ್ಪರ ಪ್ರತ್ಯೇಕವೂ ಆದ ಸಾಹಿತ್ಯ ಪರಿಕಲ್ಪನೆಗಳಿವೆ. ಅವು ಒಂದೊಂದು ಕೂಡ ಸರಿಯಾದುದಷ್ಟೇ. ಸಾಹಿತ್ಯವನ್ನು ಅದರೊಳಗಿನಿಂದಲೇ ಎಷ್ಟೋ ಸೀಳುಗಳನ್ನಾಗಿ ಒಡೆಯಬಹುದು. ಆದರೆ ಸಾಹಿತ್ಯ ಚರಿತ್ರೆ ಈ ಸೀಳುಗಳನ್ನು ಅಷ್ಟು ಸುಲಭವಾಗಿ ಗುರುತಿಸುವುದಿಲ್ಲ. ಬದಲಾಗಿ ಸಾಹಿತ್ಯವನ್ನು ಸರಳ ರೇಖಾತ್ಮಕವಾಗಿ ಗ್ರಹಿಸಿ ಅದರೊಳಗಿನ ಭಿನ್ನತೆಗಳನ್ನು ಮೌಲ್ಯ ಪಲ್ಲಟಗಳನ್ನು ಸೂಕ್ಷ್ಮವಾಗಿ ಗ್ರಹಿಸದೆ, 'ಸಾಹಿತ್ಯ' ಎಂಬ ಗ್ರಹಿಕೆಗೆ ತಂದುಕೊಳ್ಳುವ ತುಣುಕುಗಳ ಮಟ್ಟಕ್ಕೆ ಇಳಿಸುತ್ತದೆ.

ಸಾಹಿತ್ಯ ಚರಿತ್ರೆ ಸಾಹಿತ್ಯ ಕೃತಿಗಳನ್ನೂ, ಕವಿಗಳನ್ನೂ ಒಂದು ಸೂತ್ರವೊಂದರಲ್ಲಿ ಪೋಣಿಸುವ ಕೆಲಸವನ್ನು ಮಾಡುತ್ತವೆ. ಸಾಹಿತ್ಯವನ್ನು ಕಾಲಬದ್ಧವಾದ ಸಾತತ್ಯದ ನೆಲೆಯಲ್ಲಿ ಸಂಯೋಜಿಸಿಕೊಳ್ಳುತ್ತದೆ. ಈ ಸಂಯೋಜನೆಯೇ ಸಾಹಿತ್ಯಕ್ಕೆ ಒಂದು ಅರ್ಥವನ್ನು ಮತ್ತು ಸ್ಥಾನಮಾನವನ್ನು ತಂದುಕೊಡುತ್ತದೆ. ಹೀಗೆ ಪ್ರಾಪ್ತವಾಗುವ ಸ್ಥಾನಮಾನವೇ ಓದುಗನಲ್ಲಿ ಕೃತಿಯೊಂದರ ಓದಿನ ಸಾಧ್ಯತೆಯನ್ನು ಉಂಟು ಮಾಡುತ್ತದೆ. ಹೀಗೆ ಕಟ್ಟಲ್ಪಡುವ ಸಾಹಿತ್ಯ ಚರಿತ್ರೆ ಸಾಹಿತ್ಯದ ಮೂಲಕ ಭಾಷೆಯೇ ಜನಮುಖಿಯಾಗಿ ಕಟ್ಟುವ ಚರಿತ್ರೆಗಿಂತ ಇದು ಬೇರೆಯಾಗುತ್ತದೆ. ಒಂದು ನಾಡಿನ ಜನಸಮುದಾಯ ಕೆಲವು ಕೃತಿಗಳೊಂದಿಗೆ, ಲೇಖಕರೊಂದಿಗೆ ಮೂರ್ತರೂಪದ ಯಾವ ಚರಿತ್ರೆಯನ್ನು ಕಟ್ಟದೆ ಅವರ ಪಠ್ಯಗಳ ಜೊತೆ ಒಂದು ಬಗೆಯ ಅನುಸಂಧಾನವನ್ನು ಮಾಡುತ್ತಿರುತ್ತದೆ. ಕುಮಾರವ್ಯಾಸನ ಜೊತೆ, ಲಕ್ಷ್ಮೀಶನ ಜೊತೆ ಒಂದು ಚರಿತ್ರೆಯನ್ನು ಯಕ್ಷಗಾನ, ತಾಳಮದ್ದಳೆ, ಕಾವ್ಯವಾಚನದ ಮೂಲಕ ಜನ ಕಟ್ಟಿಕೊಂಡಿದ್ದಾರೆ. ಅಂದರೆ ಒಂದು ಕಾಲದ ಕೃತಿ, ಲೇಖಕರ ಜೊತೆ ಸಮುದಾಯ ಪ್ರಾಯೋಗಿಕವಾಗಿ ಬದುಕುತ್ತಿರುತ್ತಾರೆ. ಈ ಬದುಕೇ ಒಂದು ಬಗೆಯ ಚರಿತ್ರೆ ಕಟ್ಟುವ ಕ್ರಿಯೆ ಆಗಿರುತ್ತದೆ. ಇದನ್ನು ಸಾಹಿತ್ಯ ಚರಿತ್ರೆ ಗ್ರಹಿಸಿಕೊಂಡಾಗ ಸಾಹಿತ್ಯ ಕೃತಿಗಳ ಕುರಿತು ಒಂದು ವಸ್ತುನಿಷ್ಠ ನಿಲುವನ್ನು ಹೊಂದಲು ಸಾಧ್ಯವಾಗುತ್ತದೆ.

## ೬.೩ ಸಾಹಿತ್ಯ ಚರಿತ್ರೆ ಕಟ್ಟಿದ ಪೂರ್ವ–ಪಶ್ಚಿಮ ಜ್ಞಾನ ಸಂಬಂಧ:

18–19ನೇ ಶತಮಾನ ಪಶ್ಚಿಮದ ದೇಶಗಳು ಜಗತ್ತಿನ ಬೇರೆ ಬೇರೆ ಕಡೆ ಸಂಚಾರ ಮಾಡಿ ತಮ್ಮದೇ ಆದ ವಸಾಹತುಗಳನ್ನು ಸ್ಥಾಪಿಸುತ್ತಿದ್ದ ಕಾಲಘಟ್ಟ.. ತನ್ನದಲ್ಲದ ಒಂದು ನೆಲಕ್ಕೆ ಹೋದ ನಂತರ, ಆ ನೆಲವನ್ನು ತಮ್ಮದಾಗಿಸುವ ಪ್ರಕ್ರಿಯೆಯಲ್ಲಿ ಅನೇಕ ಸಂಗತಿಗಳನ್ನು ತಮಗೆ ಪೂರಕವಾಗುವ ರೀತಿಯಲ್ಲಿ ಬದಲಾಯಿಸಿಕೊಂಡಿದೆ. ಹೀಗಿರುವಾಗ ತನ್ನ ವಸಾಹತಿನ ನೆಲದಲ್ಲಿ ನಡೆಸಿದ ಜ್ಞಾನಸಂಬಂಧಿ ಕ್ರಿಯೆಗಳ ಸಂದರ್ಭದಲ್ಲಿ ತನ್ನನ್ನು ತಾನು ಹೇಗೆ ಗುರುತಿಸಿಕೊಳ್ಳುತ್ತದೆ ಎಂಬುದು ಕುತೂಹಲದ ಸಂಗತಿ.

ಪಶ್ಚಿಮದಿಂದ ಮಿಶನರಿಗಳಾಗಿ ಬಂದು ಧರ್ಮ ಪ್ರಚಾರ ಕಾರ್ಯದಲ್ಲಿ ತೊಡಗಿಕೊಂಡವರು ಮತ್ತು ಮುಂದೆ ಅಧಿಕಾರವನ್ನು ನಿರ್ವಹಿಸಲು ಬಂದು ಅಧಿಕಾರಿಗಳಾಗಿ ಕೆಲಸವನ್ನು ನಿರ್ವಹಿಸಿದವರಿಬ್ಬರೂ ಈ ನೆಲದಲ್ಲಿ ಜ್ಞಾನಸಂಬಂಧಿ ಕೆಲಸಗಳನ್ನು ನಿರ್ವಹಿಸಿದ್ದಾರೆ. ಉದಾಹರಣೆಗೆ ಕಿಟ್ಟೆಲ್ ಧರ್ಮ ಪ್ರಚಾರದ ಉದ್ದೇಶದಿಂದ ಬಂದವನಾದರೆ, ಇ.ಪಿ. ರೈಸ್ ಸರಕಾರಿ ಅಧಿಕಾರಿಯಾಗಿ ಕಾರ್ಯವನ್ನು ನಿರ್ವಹಿಸಲು ಬಂದವರು. ಆರ್ ನರಸಿಂಹಾಚಾರ್ಯ ಮತ್ತು ಎ.ವೆಂಕಟಸುಬ್ಬಯ್ಯ ಇಬ್ಬರೂ ಬಿ.ಎಲ್. ರೈಸ್‌ರ ನೇತೃತ್ವದ ಪ್ರಾಕ್ತನ ಶಾಖೆಯಲ್ಲಿ ಕಾರ್ಯವನ್ನು ನಿರ್ವಹಿಸಿದ್ದು ಒಟ್ಟಿನಲ್ಲಿ ಜ್ಞಾನ ಸಂಬಂಧವನ್ನು ಕಟ್ಟುವ ನೆಲೆಯಿಂದ ಬಹಳ ಮುಖ್ಯವಾಗುತ್ತದೆ.

ಕನ್ನಡ ಸಾಹಿತ್ಯದ ಕುರಿತಂತೆ ಒಂದು ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಪ್ರಯತ್ನವನ್ನು ಬಹಳ ಪ್ರಜ್ಞಾಪೂರ್ವಕವಾಗಿ ಮಾಡಿದ ಕಿಟ್ಟೆಲ್, ಇ.ಪಿ. ರೈಸ್‌ರ ಕಾರ್ಯದ ಹಿಂದಿನ ಧೋರಣೆಯೇ ಮೂಲತಃ ಕನ್ನಡ ಭಾಷೆಯ ಸಾಹಿತ್ಯಕ್ಕೆ ಒಂದು ಚರಿತ್ರೆ ಇಲ್ಲ ಎಂಬ ನೆಲೆಯಿಂದ ಹೊರಟದ್ದು. ಹೀಗೆ ಇಲ್ಲದಿರುವ ಒಂದು ಚರಿತ್ರೆಯನ್ನು ತಾವು ಕಟ್ಟುವುದಕ್ಕೆ ತೊಡಗಿರುವುದು ಎಂಬ ಭಾವವೇ ಅವರಲ್ಲಿ ಕಂಡುಬರುತ್ತದೆ. ಕಿಟ್ಟೆಲ್ ತಮ್ಮ 'Old Canarese Literature' ಎಂಬ ಪ್ರಬಂಧದಲ್ಲಿ ಹೀಗೆ ಹೇಳುತ್ತಾರೆ. 'In attempting to write a survey of a number of old Canarese works a feeling of sadness pervades me, I think of the great talents that have, to a large extent been misused in the production of those works."[೧] ಎಂದು ತಾವು ಕನ್ನಡ ಸಾಹಿತ್ಯದ ಸಮೀಕ್ಷೆಯನ್ನು ಮಾಡಲು ತೊಡಗಿದ ಕ್ರಿಯೆಯನ್ನು ನೆನಪು ಮಾಡುತ್ತಾರೆ. ಇ.ಪಿ. ರೈಸ್ ತಮ್ಮ 'A History of Kanarese Literature' ಎಂಬ ಕೃತಿಗೆ ಬರೆದ ಮುನ್ನುಡಿಯಲ್ಲಿ "ಕನ್ನಡ ಸಾಹಿತ್ಯದ ವ್ಯಾಪ್ತಿ, ಅದರ ಪ್ರಾಚೀನತೆಗಳ ಬಗೆಗೆ ಐವತ್ತು ವರ್ಷಗಳ ಹಿಂದೆ ತೀರ ಸ್ವಲ್ಪ ಜನರಿಗೆ ಗೊತ್ತಿದ್ದಿತು. ಸ್ವತಃ ಕನ್ನಡಿಗರಲ್ಲಿ ಕೂಡ ಕೆಲವೇ ಜನರು ಇದನ್ನು ಅರಿತಿದ್ದರು. ಈ ಬಗೆಗಿನ ನಮ್ಮ ಇಂದಿನ ಜ್ಞಾನವು ಶಿಲಾಶಾಸನಗಳು, ಪ್ರಾಚೀನ ಗ್ರಂಥಗಳ ಕೊನೆಯ ಪುಟಗಳು, ತಾಳೆಗರಿಗಳು, ಹಸ್ತಪ್ರತಿಗಳು ಮುಂತಾದವುಗಳಲ್ಲಿ ಚದುರಿ ಹೋಗಿದ್ದ ಸಂಗತಿಗಳನ್ನು ಶ್ರಮಪೂರ್ವಕವಾಗಿ ಒಂದು ಗೂಡಿಸಿದ ಕೆಲವೇ ಜನ ವಿದ್ವಾಂಸರ ಸಹನಶೀಲ ಪರಿಶ್ರಮದ ಫಲವಾಗಿದೆ". "ಲೂಯಿ ರೈಸ್ ಅವರ ಮೈಸೂರು ಗೆಜೆಟಿಯರ್‌ನ ಒಂದನೆಯ ಸಂಪುಟದಲ್ಲಿ ಹಾಗೂ 'Mysore and Coorg from Inscriptions" ಎಂಬ ಗ್ರಂಥದಲ್ಲಿ ಓದಲು ಬಹು ಯೋಗ್ಯವಾದ ಕನ್ನಡ ಸಾಹಿತ್ಯ ಚರಿತ್ರೆಯ ಸಾಮಾನ್ಯ ವಿವೇಚನೆಯನ್ನು ಕಾಣಬಹುದು. ಇದಕ್ಕೂ ಹೆಚ್ಚಿನ ವಿವರಣೆಗಳನ್ನು ಭಟ್ಟಾಕಳಂಕನ ಉದ್ಗ್ರಂಥವಾದ "ಕರ್ನಾಟಕ

ಶಬ್ದಾನುಶಾಸನ"ಕ್ಕೆ ಶ್ರೀ ಲೂಯಿ ರೈಸ್ ಅವರೇ ಕೊಟ್ಟ ಪ್ರಸ್ತಾವನೆಯಲ್ಲಿ ನೋಡಬಹುದಾಗಿದೆ."[3] ಈ ಮಾತುಗಳಲ್ಲಿ ವ್ಯಕ್ತವಾಗುವ ಅಂಶಗಳೆಂದರೆ, ಕನ್ನಡ ಸಾಹಿತ್ಯಕ್ಕೆ ಒಂದು ಸಾಹಿತ್ಯ ಚರಿತ್ರೆಯ ಮಾದರಿಯನ್ನು ಕಟ್ಟುವ ಪ್ರಯತ್ನವನ್ನು ಈಗ ತಾವು ಮಾಡುತ್ತಿದ್ದೇವೆ ಎಂದು ತಿಳಿದು ಆ ಮೂಲಕ ಕನ್ನಡದ ಒಂದು ಕೊರತೆಯನ್ನು ನೀಗಿಸಲು ಪ್ರಯತ್ನವನ್ನು ಮಾಡಿದ್ದೇವೆ ಎನ್ನುತ್ತಾರೆ. ಆ ಮೂಲಕ ಒಂದು ಹೊಸಜ್ಞಾನದ ಉತ್ಪಾದನೆಯನ್ನು ತಾವು ಮಾಡಿದ್ದೇವೆ ಎಂದರೆ ಪೂರ್ವದ ನಾಡಿನ ಸಾಹಿತ್ಯಕ್ಕೆ ಪಶ್ಚಿಮದಿಂದ ಬಂದ ತಾವು ತಮ್ಮ ಜ್ಞಾನದ ಆಧಾರದಿಂದ ಇಲ್ಲಿನ ಭಾಷೆಯನ್ನು, ಸಾಹಿತ್ಯವನ್ನು ಬೆಳಗಿಸುವ, ಉನ್ನತೀಕರಿಸುವ ಕೆಲಸ ಮಾಡುತ್ತಿದ್ದೇವೆ ಎಂಬ ಭಾವದ ಛಾಯೆ ಈ ಮಾತುಗಳಲ್ಲಿ ಇದೆ.

ವಸಾಹತು ತನ್ನ ಆಳ್ವಿಕೆಯಲ್ಲಿ ಜ್ಞಾನರೂಪಗಳ ನಿರ್ವಚನವನ್ನು ಅಧಿಕಾರದ ನೆಲೆಯಲ್ಲಿ ಮಾಡುತ್ತದೆ. ಅದರ ಹಿಂದೆ ತಾವು ಶ್ರೇಷ್ಠ ಎಂಬ ತಿಳುವಳಿಕೆಯ ಪ್ರಭಾವ ಇರುತ್ತದೆ. ಹೀಗಾಗಿಯೇ ಸಾಹಿತ್ಯ ಚರಿತ್ರೆ, ಗ್ರಂಥ ಸಂಪಾದನೆ, ಶಾಸನ ಸಂಗ್ರಹ ಮೊದಲಾದ ಜ್ಞಾನರೂಪಗಳನ್ನು ಕಟ್ಟಿದ ಕ್ರಮದಲ್ಲೇ ಈ ಜ್ಞಾನ ಈಗಾಗಲೇ ತಮ್ಮಲ್ಲಿ ಇದೆ. ಈ ನೆಲದಲ್ಲಿ ಇಲ್ಲ ಎಂಬ ತಿಳುವಳಿಕೆಯನ್ನು ಸಾರುತ್ತದೆ. ಕನ್ನಡದ ಸಾಹಿತ್ಯ ಚರಿತ್ರೆಯನ್ನು ಇಂಗ್ಲಿಷ್ ಭಾಷೆಯಲ್ಲಿ ಕಟ್ಟುವ ಮೂಲಭೂತ ಉದ್ದೇಶವೇ ಕನ್ನಡ ತಿಳಿಯದೇ ಇರುವ ಇಂಗ್ಲಿಷ್ ಓದುಗರಿಗಾಗಿ ಸಿದ್ಧಪಡಿಸಿದ್ದು ಎಂಬ ಮಾತನ್ನು ಇ.ಪಿ. ರೈಸ್ ಹೇಳುತ್ತಾರೆ. ಕನ್ನಡವನ್ನು ಕನ್ನಡ ಭಾಷೆಗಿಂತ ಹೊರಗಿನ ವಲಯದಲ್ಲಿ ಅದರ ಚಿತ್ರವನ್ನು ಕಟ್ಟಿಕೊಡುವ ಮಾದರಿಯೇ ಇಲ್ಲಿ ಮುಖ್ಯವಾಗಿರುವುದು. ಜ್ಞಾನರೂಪವನ್ನು ವಸಾಹತು ಒಂದು ಅಧಿಕಾರರೂಪವಾಗಿ ಒಟ್ಟಿನಲ್ಲಿ ಗ್ರಹಿಸಿಕೊಂಡ ಬಗೆಯನ್ನು ಇಲ್ಲಿ ಕಾಣುತ್ತೇವೆ. ಹೀಗಾಗಿ ತಾನು ಕಟ್ಟುವ ಜ್ಞಾನರೂಪವು ಅಧಿಕೃತವೂ, ನಿಖರವೂ ಆಗಿದ್ದು, ಈಗಾಗಲೇ ಈ ಭಾಷೆಯು ತನ್ನ ಕಥನ ಕ್ರಮದಲ್ಲಿ ಕಟ್ಟಿಕೊಂಡಿರುವ ಪುರಾಣ ಮಾದರಿಯ ಕಾಲ ನಿರೂಪಣೆ, ಇತಿಹಾಸ ನಿರೂಪಣೆಯ ಕ್ರಮವನ್ನು ಅಲ್ಲಗಳೆದು ತನ್ನ ಜ್ಞಾನ ಮಾದರಿಯನ್ನು ಪ್ರತಿಷ್ಠಾಪಿಸುವ ನೆಲೆಯಲ್ಲಿದೆ.

## ಸಂದರ್ಭ ಸೂಚಿ

1. F. Kittel: Old Canarese Literature, Indian Evargical Review, vol.1, 1874, page 64
2. E.P. Rice: A History of Kanarese Literature (ಅನುವಾದ: ಸಂಗಮನಾಥ ಜಿ. ಹಂಡಿ, ಕುಮಾರಿ ಪೌಲಿನ ನಂದಗಾವ) 1975, ಪುಟ viii – ix

# ೭. ಅಧ್ಯಯನದ ಫಲಿತಗಳು:

'ವಸಾಹತುಶಾಹಿ ಕಾಲಘಟ್ಟದ ಕನ್ನಡ ಸಾಹಿತ್ಯ ಚರಿತ್ರೆ: ಒಂದು ತಾತ್ವಿಕ ಜಿಜ್ಞಾಸೆ' ಎಂಬ ಈ ಅಧ್ಯಯನದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಈಗಾಗಲೇ ಪರಿಭಾವಿಸಿದ ಕ್ರಮಗಳನ್ನು ಗಮನದಲ್ಲಿ ಇಟ್ಟುಕೊಂಡು ಒಟ್ಟು ಕನ್ನಡ ಸಾಹಿತ್ಯ ಚರಿತ್ರೆ ಹೇಗೆ ರೂಪವನ್ನು ಪಡೆಯಿತು ಎಂಬುದನ್ನು ಚಿಂತನೆಗೆ ಒಳಪಡಿಸಲಾಗಿದೆ.

ಕನ್ನಡದಲ್ಲಿ ವಸಾಹತುವಿನ ಆಳ್ವಿಕೆಯ ಸಂದರ್ಭದಲ್ಲೇ ಸಾಹಿತ್ಯ ಚರಿತ್ರೆ ರೂಪವನ್ನು ಪಡೆದದ್ದು. ಈ ಉಗಮದ ಹಿಂದೆ ಇರುವ ಕಾರಣಗಳನ್ನು ಅಧ್ಯಯನ ಶೋಧಿಸಿದೆ. ಅದೆಂದರೆ ಸಾಹಿತ್ಯ ಚರಿತ್ರೆ ಎಂಬ ಜ್ಞಾನರೂಪ ಮುಖ್ಯವಾಗಿ ಎರಡು ಉದ್ದೇಶಗಳಿಂದ ಹುಟ್ಟನ್ನು ಪಡೆಯಿತು. ಮೊದಲನೆಯದು ಧಾರ್ಮಿಕ ಉದ್ದೇಶವಾದರೆ, ಎರಡನೆಯದು ಆಡಳಿತದ ಉದ್ದೇಶ. ಹೀಗಾಗಿ ಕನ್ನಡದಲ್ಲಿ ಸಾಹಿತ್ಯ ಚರಿತ್ರೆಯ ಉಗಮದ ಹಿಂದಿನ ಮನೋಧರ್ಮ ಅದೊಂದು ಬೌದ್ಧಿಕ ವ್ಯವಸ್ಥೆಗಿಂತಲೂ ಪ್ರಭುತ್ವ ಮತ್ತು ಧಾರ್ಮಿಕ ವ್ಯವಸ್ಥೆಗೆ ಮುಖ್ಯವಾಗಿತ್ತು ಎಂಬುದು ತಿಳಿದು ಬರುತ್ತದೆ.

ಸಾಹಿತ್ಯ ಚರಿತ್ರೆಯನ್ನು ಕಟ್ಟಲಾರಂಭಿಸಿದಾಗ ಅದರ ನಿರೂಪಣೆಗಾಗಿ ಅದನ್ನು ಮತೀಯ ಕಾಲಘಟ್ಟಗಳ ನೆಲೆಯಲ್ಲಿ ವಿಭಜಿಸಲಾಯಿತು. ಮುಂದೆ ಕಾಲದ ನೆಲೆಯಿಂದ, ಕವಿಗಳ ನೆಲೆಯಿಂದ, ಕಾವ್ಯ ಪರಂಪರೆಯ ನೆಲೆಯಿಂದ ವಿಭಜನೆ ಮಾಡಲಾಯಿತಾದರೂ, ಈ ವಿಭಜನೆಗಳು ಇಡೀ ಸಾಹಿತ್ಯ ಚರಿತ್ರೆಯನ್ನು ಸಮಗ್ರವಾಗಿ ಗ್ರಹಿಸಲಿಲ್ಲ. ಈ ವಿಭಜನೆಗಳು ಸೂಕ್ಷ್ಮತೆಯ ಮಟ್ಟಕ್ಕೆ ಇಳಿಯುವ ಬದಲು ವಿವರಣೆಯ ಹಂತಕ್ಕೆ ಉಳಿಯಿತು. ಸಾಹಿತ್ಯ ಚರಿತ್ರೆಯನ್ನು ಕವಿ–ಕೃತಿಗಳ ಆಧಾರದಿಂದ ಕಟ್ಟುತ್ತಲೇ ಅದು ಈ ನಾಡಿನ ಸಾಂಸ್ಕೃತಿಕವಾದ ಸಮಗ್ರ ಚರಿತ್ರೆಯನ್ನು ಕಟ್ಟುವ ಆಸಕ್ತಿಯನ್ನು ಹೊಂದಿರಬೇಕು ಎಂದು ವ್ಯಾಖ್ಯಾನಿಸಲಾಗಿದೆ.

ಕನ್ನಡದಲ್ಲಿ ಸಾಹಿತ್ಯ ಸಂಪತ್ತು ಅಪಾರವಾಗಿದ್ದರೂ ಅದನ್ನು ಒಂದು ಚರಿತ್ರೆಯ ಮಾದರಿಯಲ್ಲಿ ಕಟ್ಟುವ ಪ್ರಜ್ಞೆ ಇಲ್ಲ. ಹಾಗಾಗಿ ಈ ಜನರಿಗೆ ಚಾರಿತ್ರಿಕ ಪ್ರಜ್ಞೆಯನ್ನು ಕಲಿಸಿಕೊಡುವ ನೆಲೆಯಲ್ಲಿ ಮಿಷನರಿ ವಿದ್ವಾಂಸರ ಕೆಲಸಗಳು ನಡೆದಿದೆ. ಪೂರ್ವದ ಜೊತೆಗಿನ ಅವರ ಮುಖಾಮುಖಿಯು ಪೂರ್ವಕ್ಕೆ ಕಲಿಸಿ ಕೊಡುವ ನೆಲೆಯಲ್ಲಿ ಇದ್ದಂತೆ ತೋರುತ್ತದೆ. ಇದು ವಸಾಹತಿನ ಜ್ಞಾನ ಸೃಷ್ಟಿಯ ಮಾದರಿಯೂ ಹೌದು.

ಎಫ್. ಕಿಟ್ಟೆಲ್‌ರ ಸಾಹಿತ್ಯ ಚರಿತ್ರೆಯ ಬರವಣಿಗೆ ಕನ್ನಡ ಸಾಹಿತ್ಯದ ಬೆಳವಣಿಗೆಯ ಹಂತಗಳನ್ನು, ಬೆಳವಣಿಗೆಯ ಕ್ರಮವನ್ನು ಗುರುತಿಸುವಲ್ಲಿ ಸಫಲವಾಯಿತು. ಇದರ ತಾತ್ವಿಕತೆಯ ಆಧಾರದಲ್ಲೇ ಮುಂದಿನ ಕನ್ನಡ ಸಾಹಿತ್ಯ ಚರಿತ್ರೆಗಳು ರೂಪುಗೊಂಡಿತು. ಎಫ್. ಕಿಟ್ಟೆಲ್‌ರು

ಕನ್ನಡದ ನೆಲದಲ್ಲಿ ಲಭ್ಯವಾಗುವ ಅಪಾರ ಪ್ರಮಾಣದ ಮಾಹಿತಿಗಳು, ಹಸ್ತಪ್ರತಿಗಳನ್ನು ಬಳಸಿಕೊಂಡೇ ಅದರ ನಿಖರತೆಗಾಗಿ ಪ್ರಾಚೀನ ಕಾವ್ಯಗಳ ಜೊತೆ ಅನುಸಂಧಾನವನ್ನು ನಡೆಸುತ್ತಾರೆ. ಸಾಹಿತ್ಯ ಚರಿತ್ರೆ ಕನ್ನಡದಲ್ಲಿ ಇಲ್ಲವೆಂಬ ನೆಲೆಯಿಂದ ಹೊರಟವರು ಇಲ್ಲೇ ಲಭ್ಯವಾದ ಪ್ರಾಚೀನ ಕಾವ್ಯಗಳ ಉಲ್ಲೇಖಗಳಿಂದಲೇ ಒಂದು ಸಾಹಿತ್ಯ ಚರಿತ್ರೆಯನ್ನು ಕಟ್ಟಲು ಸಾಧ್ಯವಾಯಿತು. ದೇಶೀಯ ಭಾಷೆಯ ಸಾಹಿತ್ಯಕ್ಕೆ ಅದರ ಭಾಷಿಕ ರಚನೆಗಳನ್ನು ಶೋಧಿಸಿ ಅದರ ಮೂಲಕವೇ ಅಸ್ತಿತ್ವವನ್ನು ತಂದುಕೊಟ್ಟರು. ಎಫ್. ಕಿಟ್ಟೆಲ್ ಕನ್ನಡಕ್ಕೆ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಮೂಲಕ ಕನ್ನಡದ ವರ್ತಮಾನವನ್ನು ತೋರಿಸಿಕೊಟ್ಟರು. ಗತವನ್ನು ಪುನರ್ ರೂಪಿಸುವ ಪ್ರಯತ್ನದ ಹಿಂದೆ ವರ್ತಮಾನವನ್ನೇ ತೋರಿಸುವ ಉದ್ದೇಶ ಕಿಟ್ಟೆಲ್‌ರ ಬರಹದ ಹಿಂದೆ ಇತ್ತು ಎಂಬುದನ್ನು ತಿಳಿಯಬಹುದು.

ಇ.ಪಿ. ರೈಸ್ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕಟ್ಟುವಾಗ ಕಾಲಘಟ್ಟಗಳ ನಡುವೆ ಉಂಟಾದ ಪಲ್ಲಟಗಳನ್ನು ಬಹುಸೂಕ್ಷ್ಮವಾಗಿ ಗುರುತಿಸುವ ಚರಿತ್ರೆಕಾರ. ಕನ್ನಡದ ಮೂಲಜ್ಞಾನ ಪರಂಪರೆಯ ಜೊತೆ ಅನುಸಂಧಾನವನ್ನು ಮಾಡುತ್ತಲೇ ಕನ್ನಡದ ಕಾವ್ಯ ಪರಂಪರೆ ತಾನೇ ಕಟ್ಟಿಕೊಂಡಿದ್ದ ಚರಿತ್ರೆಯ ಸ್ವರೂಪವನ್ನು ಗುರುತಿಸುತ್ತಾರೆ.

ದೇಸೀಯ ಪಂಡಿತ ಪರಂಪರೆಯ ಮುಂದುವರಿಕೆಯಾಗಿ ಆರ್. ನರಸಿಂಹಾಚಾರ್ಯ ಮತ್ತು ಎ. ವೆಂಕಟಸುಬ್ಬಯ್ಯನವರನ್ನು ಕಾಣಲಾಗಿದೆ. ಆರ್. ನರಸಿಂಹಾಚಾರ್ಯರ ಕವಿಚರಿತೆ ಸಂಪುಟಗಳು ಕನ್ನಡವನ್ನು ಕವಿಗಳ ಆಧಾರದಲ್ಲಿ ನಿರೂಪಿಸುತ್ತಲೇ, ಕನ್ನಡನಾಡಿನ ಭಾಷೆಯ, ಪ್ರಾಚೀನತೆಯನ್ನು ಗುರುತಿಸಬಲ್ಲವರಾಗಿ, ಆ ಮೂಲಕ ಸಾಹಿತ್ಯ ಚರಿತ್ರೆ ಭಾಷೆಯ ತಿಳುವಳಿಕೆಯನ್ನು ವಿಸ್ತಾರ ಮಾಡುವ ನೆಲೆಯದ್ದಾಗಿ ಕಾಣುತ್ತದೆ.

ಆರ್. ನರಸಿಂಹಾಚಾರ್ಯರು ಕವಿಚರಿತೆಗೆ ತನ್ನದೇ ಆದ ಒಂದು ಮಾದರಿಯನ್ನು ಶೋಧಿಸಿಕೊಂಡಿದ್ದಾರೆ. ಕವಿಗಳ ಕಾಲ, ಕೃತಿ, ಮತಗಳನ್ನು ನಿರೂಪಿಸುತ್ತಲೇ ಕನ್ನಡದ ಕವಿ ಪರಂಪರೆಯನ್ನು ಕಾಲಾನುಕ್ರಮಣಿಕೆಯ ನೆಲೆಯಲ್ಲಿ ಜೋಡಿಸುವ ಪ್ರಯತ್ನ ಇದಾಗಿದೆ. ಕಾಲದ ನಿಖರತೆಗಾಗಿ ಅವರು ಮಾಡುವ ಪ್ರಯತ್ನ ಪಶ್ಚಿಮದ ಜ್ಞಾನದ ಪರಿಣಾಮವೇ ಆದರೂ ಕಟ್ಟುವ ಬಗೆಯಲ್ಲಿ ಅದೊಂದು ದೇಸೀಯ ಜ್ಞಾನದ ಪುನಾರಚನೆಯಾಗಿಯೇ ಕಾಣುತ್ತದೆ.

ಎ. ವೆಂಕಟಸುಬ್ಬಯ್ಯನವರ ಸಾಹಿತ್ಯ ಚರಿತ್ರೆಯ ಕಲ್ಪನೆಯು ಪ್ರತಿಕ್ರಿಯೆಯ ಮಾದರಿಯದ್ದು. ಹೀಗಾಗಿ ಅವರಿಗೆ ಕವಿಚರಿತೆಯೇ ಕೇಂದ್ರ. ಕವಿಚರಿತೆಯಲ್ಲಿ ನೀಡಿರುವ ಕವಿಗಳ ಕಾಲದ ಬಗೆಗೆಯಷ್ಟೇ ಇವರ ಪ್ರಶ್ನೆ. ಕಾಲದ ನಿಖರತೆಯನ್ನು ಶೋಧಿಸುವ ಮಾದರಿಯದ್ದು. ಇವರಿಗೆ ಸಾಹಿತ್ಯ ಚರಿತ್ರೆಯ ಸಮಗ್ರತೆ ಗಮನದಲ್ಲಿಲ್ಲ. ಅಲ್ಲಲ್ಲಿ ಕವಿಗಳ ಕಾಲವನ್ನು ಸ್ಪಷ್ಟ ಮಾಡಿಸುವುದು,

ಅದಕ್ಕೆ ಪೂರಕವಾಗಿ ಶಾಸನಗಳನ್ನೂ, ರಾಜರ ಕಥನಗಳನ್ನೂ ಬಳಸಿಕೊಳ್ಳುವ ಮಾದರಿಯದ್ದು. ಈ ಎಲ್ಲಾ ಬರವಣಿಗೆಯ ಕ್ರಮಗಳು ಸಾಹಿತ್ಯ ಚರಿತ್ರೆಯನ್ನು ವ್ಯಾಖ್ಯಾನಿಸಿತು.

ಹಾಗೆಯೇ ಸಾಹಿತ್ಯ ಚರಿತ್ರೆ ಸಾಹಿತ್ಯವನ್ನು ಸಾತತ್ಯದ ನೆಲೆಯಲ್ಲಿ ಸಂಯೋಜಿಸಿಕೊಳ್ಳುತ್ತಾ, ಸಾಹಿತ್ಯವನ್ನು ಅಖಂಡವಾಗಿ ಗ್ರಹಿಸಿತು. ಸಾಹಿತ್ಯಕ್ಕೆ ಒಂದು ಚರಿತ್ರೆಯನ್ನು ಕಟ್ಟಿಕೊಳ್ಳುತ್ತಲೇ ಸಾಹಿತ್ಯವನ್ನು ಚರಿತ್ರೆ ಕಟ್ಟುವ ಒಂದು ಸಾಧನವಾಗಿ ಬಳಸಿಕೊಂಡಿತು. ಸಾಹಿತ್ಯ ಚರಿತ್ರೆಯನ್ನು ಕಟ್ಟುತ್ತಲೇ ಪೂರ್ವ ಮತ್ತು ಪಶ್ಚಿಮದ ನಡುವೆ ಒಂದು ತಿಳುವಳಿಕೆಯನ್ನು ವಿಸ್ತರಿಸುವ ನೆಲೆಯ ಸಂಬಂಧವನ್ನು ಕಟ್ಟಿಕೊಳ್ಳತೊಡಗಿತು. ಆದರೆ ಈ ತಿಳುವಳಿಕೆ ಬಹಳ ವಿಸ್ತಾರವಾಗದೆ ಮುಂದೆ ಪೂರ್ವಕ್ಕೆ ಜ್ಞಾನವನ್ನು ಕಲಿಸಿಕೊಡುವ ಮಾದರಿಯಲ್ಲಿ ಬಂದಿತು.

ಈ ಎಲ್ಲ ಹಿನ್ನೆಲೆಯಿಂದ ಕನ್ನಡ ಸಾಹಿತ್ಯ ಚರಿತ್ರೆ ವಸಾಹತುಶಾಹಿ ಕಾಲಘಟ್ಟದಲ್ಲಿ ರೂಪವನ್ನು ಪಡೆಯುತ್ತಲೇ ಒಂದು ಜ್ಞಾನರೂಪವಾಗಿ ಮುಂದೆ ಬಹು ಆಯಾಮಗಳನ್ನು ಪಡೆಯಿತು. ಇದರ ಆಧಾರದಲ್ಲಿ ಮುಂದೆ ಬೇರೆ ಬೇರೆ ಬಗೆಯ ಸಾಹಿತ್ಯ ಚರಿತ್ರೆ ಬೆಳೆದು ಬಂದಿತು. ಈ ಕಾಲಘಟ್ಟದಲ್ಲಿ ನಡೆದ ಈ ಪ್ರಯತ್ನಗಳು ಮುಂದಿನ ಒಟ್ಟು ಕನ್ನಡ ಸಾಹಿತ್ಯ ಚರಿತ್ರೆಯ ಸ್ವರೂಪವನ್ನು ಮತ್ತು ವಿನ್ಯಾಸವನ್ನು ರೂಪಿಸಿತು.

# ೮ ಆಕರ ಸೂಚಿ


೧. ಡಿ.ಎಲ್. ನರಸಿಂಹಾಚಾರ್ :

'ಪೀಠಿಕೆಗಳು, ಲೇಖನಗಳು' ಡಿ.ವಿ.ಕೆ. ಮೂರ್ತಿ ಕೃಷ್ಣಮೂರ್ತಿ ಪುರಂ, ಮೈಸೂರು, 1971

೨. ಹಾ. ಮಾ. ನಾಯಕ್ (ಸಂ):

'ಕನ್ನಡ ಸಾಹಿತ್ಯ ಚರಿತ್ರೆ' ಸಂಪುಟ–೧ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ 1974

೩. ಡಾ.ಜಿ.ಎಸ್ ಶಿವರುದ್ರಪ್ಪ (ಸಂ):

'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' ಸಂಪುಟ–೧, ಬೆಂಗಳೂರು ವಿಶ್ವವಿದ್ಯಾನಿಲಯ, 1974

೪. ಡಾ. ಸಿ. ವೀರಣ್ಣ:

ಕನ್ನಡ ಸಾಹಿತ್ಯ ಚರಿತ್ರೆ, ಚಾರಿತ್ರಿಕ ಬೆಳವಣಿಗೆ ೧, ನವಕರ್ನಾಟಕ ಪ್ರಕಾಶನ, 1986.

೫. ಡಾ. ಜಿ.ಎಸ್. ಶಿವರುದ್ರಪ್ಪ (ಸಂ):

ದಶವಾರ್ಷಿಕ ಸಾಹಿತ್ಯ ಸಮೀಕ್ಷೆ, ಬೆಂಗಳೂರು ವಿಶ್ವವಿದ್ಯಾನಿಲಯ, 1982.

೬. ಡಾ.ಕೆ.ಎಂ. ಮ್ಯಾಥ್ಯೂ:

'ಎಫ್. ಕಿಟ್ಟೆಲ್, ಒಂದು ಸಮಗ್ರ ಅಧ್ಯಯನ', ಕಿಟ್ಟೆಲ್ ಕಲಾ ಮಹಾವಿದ್ಯಾಲಯ, ಧಾರವಾಡ, 1994.

೭. ಡಾ. ಶ್ರೀನಿವಾಸ ಹಾವನೂರ:

'ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ, ಹನಿಗವಿತೆ. ಕಂಪ್ಯೂಟರ್ ಇತ್ಯಾದಿ' ಅನನ್ಯ ಪ್ರಕಾಶನ, ಮೈಸೂರು, 1982.

೮. ಡಾ. ಶ್ರೀನಿವಾಸ ಹಾವನೂರ:

ಹೊಸಗನ್ನಡದ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1974.

೯. ಡಾ.ಎಂ.ಎಂ ಕಲಬುರ್ಗಿ:

ಮಾರ್ಗ ಸಂಪುಟ – ೧, ನರೇಶ್ ಆಂಡ್ ಕಂಪನಿ, ಬೆಂಗಳೂರು, 1988.

೧೦. ಡಾ. ಗೀತಾ ಎಸ್. ನಂದಿಹಾಳ:

'ಕನ್ನಡಕ್ಕೆ ಬಾಸೆಲ್ ಮಿಶನರಿಗಳ ಕೊಡುಗೆ' ಕಿಟ್ಟೆಲ್ ಕಲಾ ಮಹಾ ವಿದ್ಯಾಲಯ, ಧಾರವಾಡ 2003.

೧೧. ಡಾ। ರಂ. ಶ್ರೀ. ಮುಗಳಿ:

ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್ ಹೌಸ್, ಮೈಸೂರು, 2002.

೧೨. ಡಾ. ಎಫ್.ಟಿ ಹಳ್ಳಿಕೇರಿ (ಸಂ):

ಡಿ.ಎಲ್. ನರಸಿಂಹಾಚಾರ್ ಶತಮಾನ ಸ್ಮರಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2005.

೧೩. ಪ್ರಧಾನ್ ಗುರುದತ್, ಎನ್.ಎನ್ ತಾರಾನಾಥ್ (ಸಂ):

ಶ್ರೀಮುಖ (ಡಾ.ಟಿ.ವಿ ವೆಂಕಟಾಚಲ ಶಾಸ್ತ್ರಿ ಅಭಿನಂದನಾ ಗ್ರಂಥ), ಅಭಿನಂದನಾ ಸಮಿತಿ, ಮೈಸೂರು, 1997.

೧೪. ಡಾ.ಎಸ್. ಚಂದ್ರಶೇಖರ್ (ಅನು: ಸಿ. ನಾಗಣ್ಣ):

ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, 2000.

೧೫. ಡಾ। ನಟರಾಜ ಹುಳಿಯಾರ್:

ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, 2004.

೧೬. ರೆನೆ ವೆಲಕ್, ಆಸ್ಟಿನ್ ವಾರೆನ್: ಸಿ.ಪಿ.ಕೆ (ಅನು)

ಸಾಹಿತ್ಯ ತತ್ವ, ಜಿ. ಕಲ್ಲಯ್ಯ ಆಂಡ್ ಸನ್ಸ್, ಬೆಂಗಳೂರು, 1994.

೧೭. ಡಾ. ಶಿವರಾಮ ಪಡಿಕ್ಕಲ್:

ನಾಡುನುಡಿಯ ರೂಪಕ ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ, 2001.

೧೮. ತ.ಸು ಶ್ಯಾಮರಾಯ ಮತ್ತು ಮೇ ರಾಜೇಶ್ವರಯ್ಯ:

ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, 1964.

೧೯. ಡಾ. ಎಂ. ಚಿದಾನಂದ ಮೂರ್ತಿ:

'ಹೊಸತು ಹೊಸತು' ಕನ್ನಡ ವಿಶ್ವವಿದ್ಯಾಲಯ ಹಂಪಿ, 1993.

೨೦. ಕೀರ್ತಿನಾಥ ಕುರ್ತಕೋಟಿ:

'ಯುಗಧರ್ಮ ಹಾಗೂ ಸಾಹಿತ್ಯ ದರ್ಶನ' ಮನೋಹರ ಗ್ರಂಥಮಾಲಾ, ಧಾರವಾಡ, 1962.

೨೧. ಡಾ। ರಾ.ಯ. ಧಾರವಾಡಕರ:

'ಹೊಸಗನ್ನಡ ಸಾಹಿತ್ಯದ ಉದಯಕಾಲ' ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ 1975.

೨೨. ಡಾ। ರಹಮತ್ ತರೀಕೆರೆ:

'ಕನ್ನಡ ಸಂಶೋಧನೆ: ತಾತ್ವಿಕ ವಿಚಾರ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, 2007.

೨೩. ಎ.ವಿ. ನಾವಡ (ಸಂ)

ಕನ್ನಡ ಅಧ್ಯಯನ, ಮಳೆ ಸಂಚಿಕೆ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, 2003.

೨೪. ಡಾ। ಎಂ. ಚಂದ್ರ ಪೂಜಾರಿ:

ಸಂಶೋಧನಾ ಪ್ರಸ್ತಾವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, 2008.

೨೫. ಎಫ್. ಕಿಟ್ಟೆಲ್

'Old Canarese Literature' Indian Evangical Review Missionary Thought and Effect Vol.1 1874

೨೬. ಎಫ್. ಕಿಟ್ಟೆಲ್

'An Essay On Canarese Literature Nagavarma's Prosody 1874

೨೭. ಡಾ। ಎ. ವೆಂಕಟಸುಬ್ಬಯ್ಯ

ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ ಕರ್ನಾಟಕ ಸಂಘ ಬೆಂಗಳೂರು ಸೆಂಟ್ರಲ್ ಕಾಲೇಜು 1927

೨೮. ಆರ್. ನರಸಿಂಹಾಚಾರ್ಯ

ಕರ್ನಾಟಕ ಕವಿ ಚರಿತೆ ಮೂರು ಸಂಪುಟಗಳು ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು 1972–74

೨೯. ಇ.ಪಿ. ರೈಸ್ (ಅನು: ಸಂಗಮನಾಥ ಜಿ. ಹಂಡಿ, ಕುಮಾರಿ ಪೌಲಿನ ನಂದಗಾವ)

ಕನ್ನಡ ಸಾಹಿತ್ಯ ಚರಿತ್ರೆ ಶರತ್‌ಪ್ರಕಾಶನ ಮೈಸೂರು 1975